# ಅನನ್ಯ ಅಭಿವ್ಯಕ್ತಿ

ಸಂಪುಟ- 1 ಸಂಚಿಕೆ- 5 ಡಿಸೆಂಬರ್ 1998



## ಈ ಸಂಚಿಕೆಯಲ್ಲಿ

## ಪ್ರತಿಕ್ರಿಯೆ

ವಿಮರ್ಶಕ ತನ್ನ ಪಾತ್ರವನ್ನು ಪ್ರಾಮಾಣಿಕವಾಗಿಯೇ ನಿರ್ವಹಿಸಿ, ತನ್ನ ಇತಿ-ಮಿತಿ ವ್ಯಾಪ್ತಿಯನ್ನರಿತು ಪ್ರಭಾವಪೂರ್ಣ ವಿಮರ್ಶೆಯನ್ನೇ ಬರೆಯುತ್ತಾನೆ. ಆದರೆ ಅದು ಪತ್ರಿಕೆಯಲ್ಲಿ ಪ್ರಕಟವಾದಾಗ, ಇದು ತಾನು ಬರೆದ ವಿಮರ್ಶೆಯೇ - ಎನ್ನುವಷ್ಟು ವಿರೂಪಗೊಂಡಿರುತ್ತದೆ. ಇದರ ಬಗ್ಗೆ ಪ್ರತಿಕ್ರಿಯೆ ವ್ಯಕ್ತಪಡಿಸಿದರೆ ಬರುವ ಅಲ್ಪಸ್ವಲ್ಪ ಲೇಖನಕ್ಕೂ ಕತ್ತಿ ಬೀಳುವುದು ನಗ್ನಸತ್ಯ! ಇದನ್ನು ಪತ್ರಿಕಾ ಕಚೇರಿಯ ಒಳಹೊಕ್ಕು ನೋಡಿದಾಗಲೇ ಅರಿವಾಗುವುದು...

**-ಗೌತಮ**

ಒಂದು ಗಂಭೀರ ಚಿಂತನೆಯ, ಸಹಜ ಕಳಕಳಿಯಿರುವ ಲೇಖನವನ್ನೋದುವಾಗ ಗ್ರಹಿಕೆ ಎನ್ನುವುದು ಬಹಳ ಮುಖ್ಯವಾಗುತ್ತದೆ. ಈ ಲೇಖನದ ಮುಖ್ಯ ಧ್ವನಿ ಏನು? ಇದರ ಕಾಳಜಿಗಳೇನು? ಎನ್ನುವುದನ್ನು ಅರಸುವಿಕೆಯಲ್ಲಿ ಓದುಗನ ಜವಾಬ್ದಾರಿಯಾಗುತ್ತದೆ. ನನ್ನ ಲೇಖನ-ಸಂಗೀತ ವಿಮರ್ಶೆಯ ಬೆಳಕು-ವಿನಲ್ಲಿ ನನ್ನ ಸಂಪೂರ್ಣ ಕಳಕಳಿ ನಮ್ಮ ಕನ್ನಡದಲ್ಲಿ ಸಂಗೀತ ಕಲೆಗೆ ಪ್ರಾಯೋಗಿಕ ವಿಮರ್ಶೆ ಇನ್ನೂ ಹುಟ್ಟಿಲ್ಲವಲ್ಲ ಎನ್ನುವುದೇ ಆಗಿದೆ. ಸಂಗೀತವಾಗಲೀ, ಯಾವುದೇ ಕಲೆಯಾಗಲೀ, ಒಂದು ಜೀವಂತ ನದಿಯಿದ್ದ ಹಾಗೆ. ಅದು ಕಾಲದಿಂದ ಕಾಲಕ್ಕೆ ಹೊಸ ಹುಟ್ಟನ್ನು ಪಡೆಯುತ್ತಾ ಹಳತರ ಮೇಲೆ ಹೊಸತನ್ನು ಕಟ್ಟುತ್ತಾ ತನಗಾಗದುದನ್ನು ಒಳಗೇ ಅರಗಿಸಿಕೊಳ್ಳುತ್ತಾ ತನಗೆ ಹೊಂದುವುದನ್ನು ರಾಜಾರೋಷವಾಗಿ ಸ್ವೀಕರಿಸಿಕೊಳ್ಳುತ್ತ ಹರಿಯುವಂತೆ ಬೆಳೆಯುವಂತೆ ಕಲೆಯೇ ಬೆಳೆಯುತ್ತದೆ. ಇವುಗಳೆಲ್ಲವನ್ನೂ ಗುರುತಿಸುವುದೇ ಪ್ರಾಯೋಗಿಕ ವಿಮರ್ಶೆಯ ಮೊದಲ ಕೆಲಸ; ಕಲೆ ಬೆಳೆದಂತೆ ವಿಮರ್ಶೆಯು ಬೆಳೆಯುವುದು. ಸಹಜ ಬೆಳವಣಿಗೆ ವಿಮರ್ಶೆ ಬೆಳೆದಂತೆ ಅದಕ್ಕೆ ಸಂಬಂಧಪಟ್ಟ ಭಾಷೆಯಲ್ಲಿ ಸುಂದರವಾಗಿ ಬೆಳೆಯುತ್ತದೆ. ಒಳ್ಳೆಯ ಭಾಷೆ ಕೇವಲ ಸಾಹಿತ್ಯಕ್ಕೆ ಬೇಕು ಎನ್ನುವುದಾಗಲೀ, ನಮ್ಮಲ್ಲಿರುವುದೇ ಸರ್ವಶ್ರೇಷ್ಠ ಎಂದು ಭಾವಿಸುವುದಾಗಲೀ, ಹೊಸತನ್ನು ಬಯಸದ ಸೀಮಿತ ಭಾವನೆಗಳು ಅಷ್ಟೇ. ಅರಿವಿನ ಕಿಟಕಿಗಳನ್ನು ಕಲಾ ಅಭಿಮಾನಿಗಳು ಸದಾ ತೆರೆದಿಟ್ಟುಕೊಂಡರೆ ಹೊಸ ಸಾಧ್ಯತೆಗಳನ್ನು ಸ್ವಾಗತಿಸಿದರೆ ಕಲೆಗೂ ಕಲಾವಿದನಿಗೂ ಪ್ರೋತ್ಸಾಹ ಸಿಗುತ್ತದೆ.

**-ಶಾಂತಾ ನಾಗರಾಜ್**

''ಸಂಗೀತ ವಿಮರ್ಶೆಯ ಬೆಳಕು'' - ಲೇಖನ ಕುರಿತ ಪ್ರತಿಕ್ರಿಯೆಯ ಪ್ರಕಟಣೆಯನ್ನು ಇಲ್ಲಿಗೆ ಮುಕ್ತಾಯಗೊಳಿಸುತ್ತಿದ್ದೇವೆ.

''ಪ್ರತಿಕ್ರಿಯೆ''ಯ ಬಗ್ಗೆ ಕೆಲವು ವಿಷಯಗಳನ್ನು ಓದುಗರ ಗಮನಕ್ಕೆ ತರಲಿಚ್ಛಿಸುತ್ತೇವೆ. ಮೊದಲನೆಯದಾಗಿ ಪ್ರತಿಕ್ರಿಯೆಗಳು ಚಿಕ್ಕದಾಗಿ ಕೆಲವಾರು ವಾಕ್ಯಗಳಲ್ಲಿಯೇ ಸಂಗ್ರಾಹ್ಯ ಗುಣವನ್ನು ಹೊಂದಿರಬೇಕು. ಅಲ್ಲದೆ, ಯಾವುದೇ ಅನಿಸಿಕೆಯೂ ವೈಯಕ್ತಿಕ ನೆಲೆಗಟ್ಟಿನಲ್ಲಿರದೆ ವಿಚಾರಕ್ಕೆ ನೇರವಾಗಿ ಸಂಬಂಧಿಸಿರಬೇಕು. ಮೇಲಿನ ಲೇಖನದ ಬಗ್ಗೆ ಬಂದ ಪತ್ರಗಳಲ್ಲಿ ಕೆಲವು ಆರೆಂಟು ಪುಟಗಳಿಗೂ ಮೀರಿದುದಾಗಿದ್ದವು. ಕೆಲವು ಅನಿಸಿಕೆಗಳು ತೀರಾ ವ್ಯಕ್ತಿಗತವಾದದ್ದು ವಿಷಾದದ ಸಂಗತಿ. ಇಂತಹ ಪ್ರತಿಕ್ರಿಯೆಗಳನ್ನು ಪ್ರಕಟಿಸುವುದು ಕಷ್ಟಸಾಧ್ಯ.

**-ಸಂ**

**ಮುಖಪುಟದ ಚಿತ್ರ :**
ಸುಗಮ ಸಂಗೀತದ ಹರಿಕಾರ **ದಿವಂಗತ ಮೈಸೂರು ಅನಂತಸ್ವಾಮಿ** - ಕೃಪೆ : ರಾಜು ಅನಂತಸ್ವಾಮಿ

# ಭರತಮುನಿಯ ನಾಟ್ಯಶಾಸ್ತ್ರ - 5



## ರಸಭಾವ

ಪ್ರೊ|| ಸಾ.ಕೃ. ರಾಮಚಂದ್ರರಾವ್

ನಾಟ್ಯವೆನ್ನುವುದು ಮೂರೂ ಲೋಕಗಳಲ್ಲಿ ನಡೆಯುವ ಎಲ್ಲ ವಿದ್ಯಮಾನಗಳ ಭಾವಾನುಕೀರ್ತನವೆಂದು ಭರತ (೧,೧೦೭) ಹೇಳಿದನಷ್ಟೆ? ಅಭಿನವಗುಪ್ತನು ಇಲ್ಲಿ ಅನುಕೀರ್ತನವೆಂಬ ಮಾತನ್ನೆತ್ತಿಕೊಂಡು. ಇದು ಬರಿಯ ಅನುಕರಣವಲ್ಲ, 'ಅನುವ್ಯವಸಾಯವಿಶೇಷ' ಎಂದು ಹೇಳಿರುವುದು ಮಾತ್ರವಲ್ಲದೆ, ಇದೇ ನಾಟ್ಯವೆನ್ನುವುದು ಎಂದೂ ಸ್ಪಷ್ಟಪಡಿಸಿದ್ದಾನೆ ('ತದಿದಮನುಕೀರ್ತನಂ ಅನುವ್ಯವಸಾಯವಿಶೇಷಃ ನಾಟ್ಯಾಪರಪರ್ಯಾಯಃ, ನಾನುಕಾರ ಇತಿ ಭ್ರಮಿತವ್ಯಂ'). ಅನುಕರಣದ ಚೌಕಟ್ಟೇನೋ ಇದೆ; ಆದರೆ 'ಕಲ್ಪನಾಪ್ರಸೂತವಾದ ಸಜೀವ ಅನುಕರಣ'. ಅದರಲ್ಲಿ ರಸ ಕೂಡಿಕೊಳ್ಳುವುದರಿಂದಲೇ ಅದು 'ನಾಟ್ಯ'ವೆಂದಾಗುತ್ತದೆ. ರಸವಿರುವುದು ಮೂರೂ ಲೋಕಗಳಲ್ಲಿ ನಡೆಯುವ ವಿದ್ಯಮಾನಗಳಲ್ಲಲ್ಲ; ಅವುಗಳನ್ನು ಕವಿಯೋ ನಟನೋ ಭಾವಾನುಕೀರ್ತನ ಮಾಡಿದಾಗಲೇ. ಆದ್ದರಿಂದಲೇ ಭರತ ಟೀಕಾಕಾರನು 'ತೇನ ನಾಟ್ಯ ಏವ ರಸಾಃ, ನ ಲೋಕ ಇತ್ಯರ್ಥಃ' ಎನ್ನುವ ಮಾತನ್ನಾಡಿದ್ದಾನೆ. ನಾಟ್ಯದಲ್ಲೆ ರಸ ಇರುವುದು, ಲೋಕದಲ್ಲಲ್ಲ ಎಂಬುದೇ ಭರತನ ಎಣಿಕೆ.

ಅಭಿನವಗುಪ್ತನ 'ಅನುವ್ಯವಸಾಯವಿಶೇಷ'ವೆಂಬ ಮಾತಿನ ಅರ್ಥವೇನು? ಭರತನ ಈ ಒಕ್ಕಣೆಯನ್ನು ನೋಡಿ (27, 42) -

***'ದೈನ್ಯೆ ದೀನತ್ವಮಾಯಾಂತಿ ತೇ ನಾಟ್ಯೇ ಪ್ರೇಕ್ಷಕಾಃ ಸ್ಮೃತಾಃ***
***ಯೇ ತುಷ್ಟಾ ತುಷ್ಟಿಮಾಯಾಂತಿ ಶೋಕೇ ಶೋಕಂ ವ್ರಜಂತಿ ಚ॥'***

***(ಯಸ್ತುಷ್ಟೇ ತುಷ್ಟಿಮಾಯಾತಿ ಶೋಕೇ ಶೋಕಮುಪೈತಿ ಚ ।***
***ದೈನ್ಯೆ ದೀನತ್ವಮಭ್ಯೇತಿ ಸ ನಾಟ್ಯೇ ಪ್ರೇಕ್ಷಕಃ ಸ್ಮೃತಃ ॥***

ರಂಗದ ಮೇಲೆ ನಟನು ದೈನ್ಯಭಾವವನ್ನು ತೋರಿಸಿದಾಗ, ನೋಡುತ್ತಿರುವ ರಸಿಕನ ಒಡಲಿನಲ್ಲೂ ಇದೇ ಭಾವ ಹೊರಹೊಮ್ಮುತ್ತದೆ. ನಟನು ನೆಮ್ಮದಿಯನ್ನು ಕಾಣಿಸಿದಾಗ ನೋಡುವವನಿಗೂ ನೆಮ್ಮದಿಯೆ. ನಟನು ಬೇಗುದಿಗೊಂಡಾಗ, ದುಃಖದುಮ್ಮಾನಗಳಿಗೆ ಪಕ್ಕಾದಾಗ ನೋಡುವವನೂ ಹಾಗೆಯೇ ಆಗುತ್ತಾನೆ. ನಟನಿಗೂ ಪ್ರೇಕ್ಷಕನಿಗೂ ಇರುವ ನಂಟು ಇಂಥದು. ಯಾವ ಭಾವವನ್ನು ನಟನು ನಟಿಸುವನೋ ಅದೇ ಭಾವವನ್ನು ಪ್ರೇಕ್ಷಕನೂ ಅನುಭವಿಸುತ್ತಾನೆ. ಕಾವ್ಯವನ್ನು ಓದುವಾಗಲೂ ರಸಿಕನಾದ ಸಹೃದಯನ ಪ್ರತಿಕ್ರಿಯೆ ಬೇರೆಯಲ್ಲ. 'ಕಾವ್ಯಂ ನಾಟ್ಯಮೇವ' ಎಂಬುದೇ ನಮ್ಮ ಆಲಂಕಾರಿಕರ ತಿಳಿವಳಿಕೆ.

ಇದನ್ನು ವಿಚಾರ ಮಾಡಿದಾಗ 'ಕಲ್ಪನಾಪ್ರಸೂತವಾದ ಸಜೀವ ಅನುಕರಣ' ಎಂಬ ನಿರೂಪಣೆಯ ಸ್ವಾರಸ್ಯ ತಿಳಿಯುತ್ತದೆ. ರಂಗದ ಮೇಲೆ ನಟನು ತೋರಿಸುವ ಭಾವ ಅಷ್ಟರಿಂದಲೇ ರಸವಾಗುವುದಿಲ್ಲ; ಪ್ರೇಕ್ಷಕನು ಆ ಭಾವವನ್ನು ತನ್ನ ಕಲ್ಪನೆಯಿಂದ, ಭಾವನಾಸಾಮರ್ಥ್ಯದಿಂದ, ತನ್ನಲ್ಲಿ ಮೂಡಿಸಿಕೊಂಡಾಗ ಅದು 'ಕಲ್ಪನಾ ಪ್ರಸೂತ'ವಾಗುತ್ತದೆ. ಕಲ್ಪನೆಯಿಂದ ಹೊರಹೊಮ್ಮಿದ್ದು ಎಂದರ್ಥ. ಇದು 'ರಸಭಾವ'. ಇದನ್ನು ಅನುಭವಿಸುವಾಗ ಪ್ರೇಕ್ಷಕನ ಅಂತಃಕರಣವೇ ಅದರಲ್ಲಿ ಸಂಪೂರ್ಣವಾಗಿ ತೊಡಗಿರುತ್ತದೆ; ಇದು ''ಸಜೀವವಾದ ಅನುಕರಣ''. ಯಾಂತ್ರಿಕವಲ್ಲ, ಹೊರಗಿನಿಂದ ನಿಯಂತ್ರಿತವಾದದ್ದಲ್ಲ. ತನ್ನೊಳಗಿನ ಸ್ಫೂರ್ತಿಯಿಂದಲೇ, ತನ್ನದೇ ಸಾಮಗ್ರಿಗಳಿಂದ, ತನ್ನದೇ ಸಾಮರ್ಥ್ಯದಿಂದ ಮೇಲೆದ್ದು ಬರುವಂಥದು.

ಆವರೆಗೆ ಇಲ್ಲದ್ದು ಆಗ ಒದಗಿಬರುವುದು ಎಂದು ಭಾವವೆಂಬ ಮಾತಿಗೆ ಅರ್ಥ. 'ಭೂ' ಎಂಬ ಧಾತುವಿಗೆ ''ಇರುವುದು'' ಎಂಬರ್ಥವಿದ್ದು, ''ಇರುವಂತೆ ಮಾಡುವುದು'' ಭಾವವಾಗುತ್ತದೆ. ರಸವನ್ನು ಉಂಟುಮಾಡುವುದು, ಮೀಂಟಿ ಮೇಲೆಬ್ಬಿಸುವುದು ರಸಭಾವ. ಕವಿಯು ಬರೆದ ಕಾವ್ಯದಲ್ಲೋ ನಾಟಕದಲ್ಲೋ ರಸ ತಾನಾಗಿ ಇರುವುದಿಲ್ಲ. ಕಾವ್ಯವನ್ನು ಓದುವಾಗ, ನಾಟಕವನ್ನು ನೋಡುವಾಗ ಸಹೃದಯನ ಒಡಲಲ್ಲಿ ರಸ ಚಿಮ್ಮುತ್ತದೆ, ಒಸರುತ್ತದೆ.

ಕಾವ್ಯದಲ್ಲಾಗಲಿ ನಾಟಕದಲ್ಲಾಗಲಿ ಹೀಗೆ ರಸವನ್ನು ಚಿಮ್ಮಿಸುವ ಸಾಮರ್ಥ್ಯ ಇರಬೇಕೆಂಬುದು ದಿಟ. ಈ ಸಾಮರ್ಥ್ಯ ಇರುವುದರಿಂದಲೆ ಕೃತಿ ಸೊಗಯಿಸುವುದು. ಒಂದು ಕೃತಿ ಉತ್ತಮವಾದುದು ಇನ್ನೊಂದು ಕಳಪೆ ಎಂದು ಹೇಳಬರುವುದು ಈ ಸಾಮರ್ಥ್ಯದ ದೆಸೆಯಿಂದಲೇ. ಇದನ್ನೆ ಪ್ರತಿಭಾ ತಾರತಮ್ಯವೆಂದೂ ಗುರುತಿಸುವುದಿದೆ. ಆದರೆ ಈ ಬಗೆಯ ಸಾಮರ್ಥ್ಯವು ರಸಭಾವದ ಒಂದು ಮುಖ ಅಷ್ಟೆ. ರಸಭಾವದ್ದು ಇಮ್ಮುಖ. ಸಹೃದಯನ ಸಾಮರ್ಥ್ಯ ಅದರ ಇನ್ನೊಂದು ಮುಖ.

ರಸವೆನ್ನುವುದು ಎಲ್ಲಿಯೋ ತೆಪ್ಪಗೆ ಬಿದ್ದುಕೊಂಡಿರುವ ವಸ್ತುವಲ್ಲ; ತೋರಿಕೊಳ್ಳದಿದ್ದರೂ ಅಡಗಿಕೊಂಡಿರುತ್ತದೆ ಎನ್ನುವಂತಿಲ್ಲ; ಯಾವುದಾದರೂ ಕೃತಿಯ ಒಂದು ಎಡೆಬಿಡದ ಗುಣ ಎನ್ನುವಂತೆಯೂ ಇಲ್ಲ. ಅನುಭವಕ್ಕೆ ಬರದ ರಸ ರಸವೇ ಅಲ್ಲ. ರಸ ಇರುವುದು ಅನುಭವದಲ್ಲೇ. ಅನುಭವವಾಗಲಿ ಎಂದೂ ಇದ್ದುಕೊಂಡಿರುವ ವಿವರವಲ್ಲವಷ್ಟೆ? ಅದೊಂದು ಕ್ರಿಯೆ, ಮಾನಸವ್ಯಾಪಾರ. ಅದು ಆಗಾಗ ಏರುತ್ತದೆ, ಇಳಿಯುತ್ತದೆ, ತೋರಿಕೊಳ್ಳುತ್ತದೆ, ಮರೆಯಾಗುತ್ತದೆ. ಹೀಗೆ ಅನುಭವಕ್ಕೆ ಅಂಟಿಕೊಂಡು ಬಂದದ್ದು ರಸ; ಅನುಭವದ ಆಸರೆಯಿಲ್ಲದೆ ರಸ ಒದಗಿಬರಲಾರದು. ರಸಭಾವ ಎನ್ನುವ ಮಾತಿನ ಸ್ವಾರಸ್ಯವೇ ಇದು.

ಭರತನು ನಾಟ್ಯವನ್ನು ಭಾವಾನುಕೀರ್ತನವೆಂದು ಕರೆದನಲ್ಲವೆ? ಅಭಿನವಗುಪ್ತನು ಇದನ್ನು ಅನುವ್ಯವಸಾಯವೆಂದು ನಿರ್ದೇಶಿಸಿದನಲ್ಲವೆ? ಇದರ ಅರ್ಥವೇನು? ಪ್ರಕೃತಿಯ ವಿದ್ಯಮಾನಗಳನ್ನು ಕಲೆ ಅನುಕರಣ ಮಾಡುತ್ತದೆ ಎನ್ನುವಾಗ ಕನ್ನಡಿಯಂತೆ ಪ್ರತಿಬಿಂಬಿಸುತ್ತದೆ ಎಂದರ್ಥವಲ್ಲ. ಇದ್ದುದನ್ನು ಇದ್ದಂತೆಯೇ ಕಾಣಿಸುವುದು ಕನ್ನಡಿಯ ಕೆಲಸ. ಕಲೆಯಲ್ಲಿನ ಅನುಕೀರ್ತನ ಇದಲ್ಲ. ಪ್ರಕೃತಿಯ ವಿದ್ಯಮಾನದ ನೆಲೆ-ಹಿನ್ನೆಲೆ, ತಥ್ಯ-ತಾತ್ಪರ್ಯ ಇವುಗಳನ್ನು ಕಲೆ ಆಶ್ರಯಿಸುತ್ತದೆ; ಆದರೆ ಆ ವಿದ್ಯಮಾನಗಳನ್ನು ಪ್ರಕೃತಿ ಒದಗಿಸುವಂತೆಯೇ ಕಲೆಯೂ ತಾನೇ ಸ್ವತಂತ್ರವಾಗಿ ಒದಗಿಸುತ್ತದೆ, ತನಗೆ ತಾನೆ ಒದಗಿಸಿಕೊಳ್ಳುತ್ತದೆ. ಪ್ರಕೃತಿಯಲ್ಲಿ ಇಲ್ಲದಿರುವ ಓರಣವನ್ನು, ಒಗಟನ್ನು, ಸ್ವಾರಸ್ಯವನ್ನು, ಸೊಗಸನ್ನು ಕಲ್ಪಿಸಿಕೊಂಡಾಗಲೆ ಕಲೆಯಾಗುವುದು. ಪ್ರಕೃತಿ ಕಂಡದ್ದರ ಆಧಾರ ಮೇಲೆ (ಅನು), ಕಲೆಯಲ್ಲಿನ ಕಲ್ಪನೆ ಸಜೀವವಾಗಿ ಕೆಲಸಮಾಡುತ್ತದೆ (ವ್ಯವಸಾಯ). ಇದು ಪ್ರತಿಬಿಂಬವಲ್ಲ, ಪ್ರತಿಕೃತಿ.

ಪ್ರಕೃತಿಯೊಡನೆ ಪ್ರಕೃತಿಯಂತೆಯೇ ಕೆಲಸ ಮಾಡುವುದು ಕಲೆಯಲ್ಲಿನ ಸ್ವಾರಸ್ಯ. ಪ್ರಕೃತಿ ಜಡವಾದರೆ ಕಲೆ ಚೇತನ; ಸಜೀವ. ಪ್ರಕೃತಿಯ ಹಿನ್ನೆಲೆಯಲ್ಲಿರುವ ಚೇತನವೇ ಸೃಷ್ಟಿಗೆ ಕಾರಣವಾಗುವ ಶಕ್ತಿ; ಇದೇ ಶಕ್ತಿಯು ಕಲೆಯ ಸೃಷ್ಟಿಗೂ ಕಾರಣವಾಗುತ್ತದೆ. ಪ್ರಾಕೃತಸೃಷ್ಟಿಯು ವ್ಯವಸಾಯವಾದರೆ ಕಲಾಸೃಷ್ಟಿಯು ಅನುವ್ಯವಸಾಯ. ಅದು ಕೀರ್ತನವಾದರೆ ಇದು ಅನುಕೀರ್ತನ. ಕಲೆ (ಅಥವಾ ಭರತನ ಭಾಷೆಯಲ್ಲಿ ನಾಟ್ಯ) ಪ್ರಕೃತಿಯ ಅನುಕರಣವಲ್ಲ; ಪ್ರಕೃತಿಗೆ ಕಾರಣವಾದ ಚೇತನದ ಅನುಕರಣ. ಪ್ರಕೃತಿಯು ಚೇತನದ ಕಲ್ಪ (ಕ್ಲೃಪ್ ಎಂಬ ಧಾತುವಿನಿಂದ)ವಾದರೆ ಕಲೆಯು ಕವಿಯ ಕಲ್ಪನೆ. ಎಂದೆಂದೂ ಒಂದೇ ತೆರನಾಗಿ ಇರುವುದು ಚೇತನವೇ; ಅದೇ ಭೂ. ಅದರಿಂದ ಉಂಟಾದುದೆಲ್ಲ ಭಾವವೇ; ಇದು ತೋರಿಯಡಗುವ, ಹರಿದು ಹೋಗುವ ಪ್ರವೃತ್ತಿ; ಅಚ್ಚಳಿಯದೆ, ಮಾರ್ಪಡದೆ, ಸ್ಥಿರವಾಗಿ ನಿಲ್ಲುವ ವಸ್ತುವಲ್ಲ. ಹರಿದು ಹೋಗುವುದು ಎಂಬರ್ಥದಲ್ಲೇ 'ಸರ' ಎಂಬ ಮಾತು (ಸೃ ಧಾತುವಿನಿಂದ); ಈ ಮಾತು ತಿರುಗು ಮುರುಗಾಗಿಯೇ 'ರಸ'ವೆಂದಾಗಿರುವುದು. ಕಾಣ್ಕೆಯುಳ್ಳ ಋಷಿ ಪಶ್ಯಕ; ವ್ಯವಹಾರದಲ್ಲಿ ಕಶ್ಯಪನಾದ. ಹೀಗೆಯೇ 'ಸರ' 'ರಸ'ವಾದದ್ದು.

ಮತ್ತೆ ಸೃಷ್ಟಿಕ್ರಿಯೆಗೆ ಕಾರಣವಾಗುವ ಶಕ್ತಿಯನ್ನು (ಪ್ರತಿಭೆಯನ್ನು) ಭರತನು 'ಅಂತರ್ಗತ ಭಾವ'ವೆಂದು ಗುರುತಿಸಿದ್ದಾನೆ. ಇದು ಪ್ರಕೃತಿಯನ್ನು ಹೊರಹೊಮ್ಮಿಸುವ ಚೇತನದಲ್ಲಿಯೂ ಇರುವಂಥದು, ಕಲಾಸೃಷ್ಟಿಗೆ ಕಾರಣವಾಗುವ ಚೇತನದಲ್ಲೂ ಇರುವಂಥದು. 'ಅಪಾರೇ ಕಾವ್ಯಸಂಸಾರೇ ಕವಿರೇವ ಪ್ರಜಾಪತಿಃ' ಎಂಬ ಮಾತಿದೆಯಲ್ಲವೆ? ಕಲಾ ಪ್ರಪಂಚದಲ್ಲಿ ಕವಿಯೇ ಸೃಷ್ಟಿಕರ್ತ. 'ಯಥಾಸ್ಮೈರೋಚತೇ ವಿಶ್ವಂ ತಥೇದಂ ಪರಿವರ್ತತೆ' ಎನ್ನುವುದು ಅದರ ಮುಂದಿನ ಸಾಲು; ಪ್ರಕೃತಿಯಲ್ಲಿರುವುದನ್ನೆ ಕವಿಯು ತನಗೆ ತೋಚಿದಂತೆ ಮಾರ್ಪಡಿಸಿಬಿಡುತ್ತಾನೆ ಎಂದು ಈ ಒಕ್ಕಣೆಯ ಅರ್ಥ. ಮಾರ್ಪಡಿಸುವುದೆಂದರೆ ಇಲ್ಲಿ ಮರುಸೃಷ್ಟಿಯೇ. ಅಲ್ಲಿ ಹರಿಯುವುದನ್ನು (ಸರವಾದದ್ದನ್ನು) ಇಲ್ಲಿ ಕವಿಯು ನಿಲ್ಲುವಂತೆ ಮಾಡುತ್ತಾನೆ (ಹೀಗೆ ರಸವಾಯಿತು). ತೋರಿಯಡಗುವ ಭಾವಕ್ಕೊಂದು ನೆಲೆಗಾಣಿಸುತ್ತಾನೆ; ಅಂತರ್ಗತವಾಗಿ ಒಳಗಿರುವ, ಅಡಗಿರುವ, ಶಕ್ತಿಯನ್ನು

ಹೊರಗೆ ಕಾಣಿಸುತ್ತಾನೆ. ತನ್ನ ಅನುಭವಕ್ಕೆ ಬಂದುದನ್ನು ಬೇರೆಯವರ ಅನುಭವಕ್ಕೆ ಸಾಮಗ್ರಿಯನ್ನಾಗಿಸುತ್ತಾನೆ.

ಹೀಗಾಗುವಾಗ ಭಾವಗಳು ಪ್ರಕೃತಿಗೂ ಕಲೆಗೂ ಸಹೃದಯನಿಗೂ ಸಾಧಾರಣವಾಗಿದ್ದುಕೊಂಡು ಆಸರೆಯಾಗಿ ನೆಲೆಗೊಂಡಿದ್ದರೆ ಅವು ಸ್ಥಾಯಿಯೆನಿಸಿಕೊಳ್ಳುತ್ತವೆ. 'ಸ್ಥಾ' ಧಾತುವಿಗೆ ಣಿನಿಪ್ರತ್ಯಯವನ್ನು ಸೇರಿಸಿದಾಗ ಆಗುವ ಮಾತು ಸ್ಥಾಯೀ (ತಿಷ್ಠತೀತಿ); ನಿಲ್ಲುವುದು, ನೆಲೆಗೊಳ್ಳುವುದು ಎಂದರ್ಥ. ಇದು ಆಸ್ವಾದವೆಂಬ ಅಂಕುರಕ್ಕೆ ಕಂದಪ್ರಾಯವಾದುದೆಂದು ಸಾಹಿತ್ಯದರ್ಪಣದಲ್ಲಿ ವರ್ಣನೆಯಿದೆ. ಆಸ್ವಾದವೆಂದರೆ ರುಚಿ ನೋಡುವುದು, ಸವಿಯುವುದು; ಇದು ಮೊಳಕೆಯಾಗಿ ಚಿಗುರಲು (ಅಂಕುರಗೊಳ್ಳಲು) ಆಸರೆಯಾಗಿರುವ ಬುಡಗೆಡ್ಡೆ, ತಾಯಿಬೇರು (ಕಂದ). ಇದು ಸ್ಥಾಯಿಯೆಂಬ ಮಾತಿನ ಧ್ವನಿ. ಕವಿಯ (ನಟನ) ಆಶಯವು ಹೃದಯ ಸಂವಾದದಿಂದ ಸಹೃದಯನಲ್ಲಿ (ಪ್ರೇಕ್ಷಕನಲ್ಲಿ) ಸಂಕ್ರಮಿಸುವುದು ರಸ; ಹರಿಯುವುದರಿಂದ ಈ ಮಾತು.

ಯಾವಾಗಲೂ ಇದ್ದೇ ಇರುವುದು ಸ್ಥಿರ. ಆದರೆ ಸ್ಥಾಯಿಯೆನ್ನುವುದು ಭಾವಕ್ಕೆ ಹೊಂದಿಕೊಂಡ ಮಾತು. ಭಾವ ಏನೆಂದರೂ ಸ್ಥಿರವಾಗದು. ಭಾವವು ಸ್ಥಾಯಿಯಾಗಿದ್ದಾಗ ಕೃತಿಗೊಂದು ಏಕತಾನತೆ, ವಸ್ತು ವಿಕಾಸ, ವಿಷಯವಿಸ್ತಾರ, ಪಾತ್ರಪೋಷಣೆ ಇವು ಒದಗಿಯಾವು. ಹೀಗೆಂದೇ ಭರತಟೀಕಾಕಾರನು 'ಏವಮೇತೇ ಸ್ಥಾಯಿನೋ ಭಾವಾ ರಸಸಂಜ್ಞಾ ಪ್ರತ್ಯವಗಂತವ್ಯಾ' ಎಂದು ಹೇಳಬೇಕಾಯಿತು. ಭಾವಗಳು ಸ್ಥಾಯಿಯಾದಾಗ ರಸವೆಂಬ ಮಾತು ಒಪ್ಪುತ್ತದೆ. ಪ್ರಸಿದ್ಧವಾದ ರಸ ಸೂತ್ರದಲ್ಲಿ ಭರತನು ಸ್ಥಾಯಿಯನ್ನು ಸೇರಿಸಿಲ್ಲದಿರುವ ವಿಚಾರವನ್ನು ಆ ಸೂತ್ರವನ್ನು ವಿವರಿಸುವಾಗ ಎತ್ತಿಕೊಳ್ಳುತ್ತೇನೆ. ಸದ್ಯಕ್ಕೆ ರಸಭಾವವೆನ್ನುವ ಮಾತಿನ ಇಂಗಿತವನ್ನು ಅರಿತುಕೊಂಡರೆ ಸಾಕು.

ರಸಭಾವವೆಂದರೆ ಎದುರಿಗಿರುವ ವಿಷಯದ ಅಥವಾ ಇಂದ್ರಿಯಗಳಿಂದ ಒದಗಿಬರುವ ಸಂವೇದನೆಯ ಅನುಭವವಲ್ಲ. ಪ್ರತ್ಯಕ್ಷವೆಂಬಂಥ ಎಣಿಕೆ ಅಲ್ಲಿ ಸಲ್ಲದು. ಕಲ್ಪನೆಯ ಪ್ರಪಂಚಕ್ಕೆ ಸೇರಿದ ಅನುಭವ. ಈ ಅನುಭವಕ್ಕೆ ಇರುವ ವಿಷಯವೂ ಕಾಲ್ಪನಿಕವಾದುದೇ. ಆದರೆ ಇಂದ್ರಿಯವ್ಯಾಪಾರಕ್ಕೆ ಬಂದ ವಿಷಯಗಳಷ್ಟೇ ಸ್ಪಷ್ಟವಾಗುತ್ತದೆ. ಒಳಗಿನ ಸಂವೇದನೆಯ ಪಾಟವ ಅಷ್ಟರಮಟ್ಟಿಗಿದ್ದರೆ ಭಾವದಲ್ಲಿ ರಸ ಒಸರುತ್ತದೆ. ಅಭಿನವಗುಪ್ತನು ತನ್ನ ಗುರುವಾದ ಭಟ್ಟತೌತನ ಅಭಿಪ್ರಾಯವನ್ನು ಉಲ್ಲೇಖಿಸುತ್ತಾನೆ - ''ಕಾವ್ಯಾರ್ಥವಿಷಯೇ ಹಿ ಪ್ರತ್ಯಕ್ಷ ಕಲ್ಪಸಂವೇದನೋದಯೇ ರಸೋದಯಃ ಇತ್ಯುಪಾಧ್ಯಾಯಃ'' ಕಾವ್ಯದ (ಅಥವಾ ಕಲೆಯ) ಯಾವುದಾದರೊಂದು ವಿವರವನ್ನೋ ಪ್ರಮೇಯವನ್ನೋ ಕುರಿತಂತೆ ಸಹೃದಯನ ಸಂವೇದನೆಯು ಪ್ರತ್ಯಕ್ಷದಂತೆಯೇ, ಕಣ್ಣಿಗೆ ಕಟ್ಟಿದಂತೆಯೇ, ಒದಗಿಬಂದಾಗ ರಸವೂ ಒದಗಿಬರುತ್ತದೆ. ಈ ಬಗೆಯ ಸಂವೇದನೋದಯವಾದಾಗಲೆ ರಸೋದಯ.

ಕಲೆಯ ರಸವನ್ನು ಹೀಗೆ ಅನುಭವಿಸಬಲ್ಲವನೇ ಸಹೃದಯ. ಕವಿಯು ಬಣ್ಣಿಸುವ ವಿಷಯದಲ್ಲಿ ಮೈಮರೆಯಬಲ್ಲವನು ಅವನು. ಆ ವಿಷಯವನ್ನು ತಾನೇ ನೇರಾಗಿ ಅನುಭವಿಸುವವನು; ಕವಿಯ ಹೃದಯದೊಂದಿಗೆ ತನ್ನ ಹೃದಯವನ್ನೂ ಒಂದುಗೂಡಿಸುವ ಸಾಮರ್ಥ್ಯ ಸಹೃದಯನದು (ಕವಿ ಹೃದಯ ತಾದಾತ್ಮ್ಯ ಯೋಗ್ಯತೆ). ಅವನ ಮನಸ್ಸೆಂಬ ಕನ್ನಡಿ ಸ್ವಚ್ಛವಾಗಿದ್ದು ಕವಿಯ ಕಾಣ್ಕೆಗೆ ಬಂದದ್ದು ಇದರಲ್ಲಿ ಪ್ರತಿಫಲಿಸುತ್ತದೆ. ಆ ಕನ್ನಡಿಯು ಸಹೃದಯನ ಸಂಸ್ಕಾರಗಳಿಂದ, ಅಭ್ಯಾಸದಿಂದ, ಪ್ರತಿಭೆಯಿಂದ ಸ್ವಚ್ಛವಾಗುತ್ತದೆ. ಎಲ್ಲರ ಮನಸ್ಸಿನಂತಲ್ಲ ಸಹೃದಯನ ಮನಸ್ಸು. ರಸೋದಯಕ್ಕೆ ಸಿದ್ಧವಾದ ಮನಸ್ಸು ಅವನದ್ದು. ಅಭಿನವಗುಪ್ತನು ಬೇರೆಡೆ (ಧ್ವನ್ಯಾಲೋಕಲೋಚನದಲ್ಲಿ) ಹೇಳಿರುವ ಮಾತುಗಳೇ ಮೇಲಿನ ಒಕ್ಕಣೆಗೆ ಮೂಲ-

''ಯೇಷಾಂ ಕಾವ್ಯಾನುಶೀಲನಾಭ್ಯಾಸವಶಾತ್ ವಿಶದೀಭೂತೇ ಮನೋಮುಕುರೇ
ವರ್ಣನೀಯತನ್ಮಯೀಭವನಯೋಗ್ಯತಾ ತೇ ಸ್ವಹೃದಯಸಂವಾದಭಾಜಃ ಸಹೃದಯಾಃ'' ■

# ಬೃಹದ್ದೇಶೀ



**ಟಿ.ಎಸ್. ಸತ್ಯವತಿ**

ಆರು ಸ್ವರಗಳಿಂದ ಕೂಡಿದ 'ತಾನ'ಗಳು ಷಾಡವತಾನಗಳು. ಐದು ಸ್ವರಗಳಿಂದ ಕೂಡಿದವು ಔಡವತಾನಗಳು. ಷಾಡವ ಮತ್ತು ಔಡವ ಮೂರ್ಛನೆಗಳನ್ನು ಉದಾಹರಣೆಗಳೊಂದಿಗೆ ವಿವರಿಸಿದ ಬಳಿಕ ಮೂರ್ಛನೆಗೂ ತಾನಕ್ಕೂ ಇರುವ ಭೇದವನ್ನು ಹೀಗೆ ಹೇಳುತ್ತಾನೆ.

''मूर्छनारोहक्रमेण तानोऽवरोहक्रमेण च।''

ಆದರೆ, ತಾನ ಕ್ರಿಯೆಯ ಎರಡು ಪ್ರಕಾರ 'ಪ್ರವೇಶ' ಮತ್ತು 'ನಿಗ್ರಹ'ಗಳ ಬಗ್ಗೆ ಬರುವ ''प्रवेशो ध्वनिसादृश्यं असंस्पर्शस्तु निग्रहः ।'' (ದತ್ತಿಲನ ಮಾತು).

ಎಂಬುದರಿಂದ ಒಂದು ಸ್ವರವನ್ನು ಅಕ್ಕಪಕ್ಕದ ಸ್ವರಗಳ ಸಹಾಯದೊಡನೆ ಹಿಡಿಯುವ ಅಥವಾ ನುಡಿಸುವ ಕ್ರಮವೆನ್ನುವುದು ಹೆಚ್ಚು ಸೂಕ್ತವೆನಿಸುತ್ತದೆ. (ನೋಡಿ : द्विविधा तानक्रिया तन्त्र्याः प्रवेशनं निग्रहस्तथा'' ಎನ್ನುವ ಭರತನ ಉಕ್ತಿಗೆ ''तत् प्रवेशनम् अधरस्वर प्रकर्षातुत्तरस्वरमार्दवाद्वा। निग्रहश्चाह असंस्पर्शः ಎನ್ನುವ ವ್ಯಾಖ್ಯಾನ)

ಮುಂದೆ, 'ಕೂಟತಾನ'ಗಳ ಅತ್ಯಂತ ಸ್ವಾರಸ್ಯಕರವಾದ ಪರಿಚಯವಿದೆ. ಸರಿ-ರಿಸ ಎಂದು ಎರಡೇ ವಿಧವಾದರೆ 'ಸರಿಗ' ಎನ್ನುವುದು ವ್ಯತ್ಕ್ರಮವಾಗಿ 'ಸರಿಗ-ಗರಿಸ-ರಿಗಸ-ಗಸರಿ-ಸಗರಿ (ರಿಸಗ-ಏಕಿಲ್ಲವೋ ಗೊತ್ತಿಲ್ಲ!) ಎಂಬ ಐದು ವಿಧವಾದ ಕೂಟತಾನಗಳಿಗೆ ಎಡೆಮಾಡಿಕೊಡುತ್ತದೆ.

ಹೀಗೆ ನಾಲ್ಕು ಸ್ವರಗಳಿಂದ ಏಳು ಸ್ವರಗಳವರೆಗೆ ಸಾಧಿಸಬಹುದಾದ ಕೂಟತಾನಗಳನ್ನು ಸಂಕ್ಷಿಪ್ತವಾಗಿ ತಿಳಿಸಿಕೊಟ್ಟು ಕೊನೆಯಲ್ಲಿ ''ಇವೆಲ್ಲವೂ ಸೇರಿ ಆಗುವ ಭೇದಗಳನ್ನು ಪ್ರದರ್ಶಿಸುವುದು ಇಲ್ಲಿ ಅತಿ ಪ್ರಸಂಗವಾದೀತು. ಬುದ್ಧಿವಂತರು ತಾವೇ ಗುರುತಿಸಬಲ್ಲರು'' ಎಂದು ಬಿಡುತ್ತಾನೆ.

ಇಂಥ ಕೂಟತಾನಗಳನ್ನೂ ಮುಂದೆ ಹೇಳುವ ಅಲಂಕಾರಗಳನ್ನೂ ಸತತವಾಗಿ ಅಭ್ಯಾಸ ಮಾಡುವುದರಿಂದ ಕಲ್ಪನಾಸಂಗೀತಕ್ಕೆ ಒದಗುವ ಪ್ರೇರಣೆ ಅಸಾಧಾರಣ.

ಇವಿಷ್ಟೂ ಸಪ್ತಸ್ವರ ಮೂರ್ಛನೆಗಳು ಮಧ್ಯ ಸ್ಥಾಯಿಯಲ್ಲಿ ಮಾತ್ರ ನುಡಿಯುವುವು. ಮಂದ್ರ ಮತ್ತು ತಾರಸ್ಥಾಯಿಗಳ ವ್ಯವಸ್ಥೆಯನ್ನು ಸಿದ್ಧಪಡಿಸುವುದಕ್ಕಾಗಿ ದ್ವಾದಶ ಸ್ವರ ಮೂರ್ಛನೆಗಳನ್ನು ಅವಶ್ಯವಾಗಿ ಉಪಯೋಗಿಸಬೇಕೆಂದು ಹೇಳಿ ಕೋಹಲನ ಹಾಗೂ ನಂದಿಕೇಶ್ವರನ (ಪೂರ್ವಾಚಾರ್ಯರು) ಮಾತುಗಳನ್ನು ಉದ್ಧರಿಸುತ್ತಾನೆ.

''द्वादशस्वरसम्पन्ना... तारमन्द्रादिसिद्धये ।''

ಉದಾ : ದನಿಸರಿಗಮಪದನಿಸರಿಗ, ನಿಸರಿಗಮಪದನಿಸರಿಗಮ... ಮುಂತಾಗಿ. ಇವುಗಳಿಗೆ ಆಕರ್ಷಕವಾದ ಹೆಸರುಗಳನ್ನು ಕೊಟ್ಟಿರುವುದೊಂದು ಸೊಗಸು. ರಜನಿ, ಅಶ್ವಕ್ರಾಂತಾ, ಹರಿಣಾಶ್ವಾ, ಹೃಷ್ಯಕಾ... ಹೀಗೆ.

ಎಲ್ಲ ಪಾರಿಭಾಷಿಕ ಶಬ್ದಗಳನ್ನೂ ನಿಷ್ಪತ್ತಿಪೂರ್ವಕವಾಗಿ ದೃಷ್ಟಾಂತ ಸಹಿತವಾಗಿ ಸ್ಫುಟವಾಗಿ

ವಿವರಿಸಿರುವುದು ಮತಂಗನ ಕೃತಿಯ ಜನಪ್ರಿಯತೆಗೆ ಒಂದು ಪ್ರಮುಖ ಕಾರಣ. ಆದರೆ ಲಿಪಿದೋಷಗಳಿಂದಲೂ ಸಾಕಷ್ಟು ಬದಲಾದ ಗಾನಕ್ರಮದಿಂದಲೂ ಈಗಿನ ಸಂಗೀತ ಪದ್ಧತಿಯ ಹಿನ್ನೆಲೆಯಲ್ಲಿ ಸರಿಯಾದ ವಿಶ್ಲೇಷಣೆಗೆ ಒದಗದಿರುವುದು ದುರದೃಷ್ಟಕರವೆನ್ನಬೇಕು.

ಗೀತದಲ್ಲಿನ ಸ್ವರಗಳು ಸ್ಥಾಯಿ, ಸಂಚಾರಿ, ಆರೋಹಿ ಮತ್ತು ಅವರೋಹಿ ಭಾವದಲ್ಲಿ ಧ್ವನಿಸಿದಾಗ 'ವರ್ಣ'ಗಳ ಉತ್ಪತ್ತಿಯಾಗುತ್ತದೆ. ಷಡ್ಜವು ಸ್ಥಾಯಿಯಾದಾಗ 'ಸಾಸಾಸಾ' ಎಂದೂ ದೈವತದ 'ಸಂಚಾರಿವರ್ಣ' 'ದದನೀನೀಪದಾ' ಎಂದೂ, ಆರೋಹಿಯು 'ಗಾಗಾಗಾಗಾ ಪಾಪಾ... ಪನಿಸದನಿನಿದಾ' ಎಂದೂ ಅವರೋಹಿಯು 'ಪಾಪಾ... ದನೀಮಾಪಾಗಾಗಾ...' (ಪಾಠದ ಸಾರಾಂಶವನ್ನು ಮಾತ್ರ ಗ್ರಹಿಸಬೇಕು) ಎಂದೂ ನುಡಿಯುತ್ತವೆ.

ವರ್ಣಗಳ ನಿಜವಾದ ಪ್ರಯೋಜನವು 'ಅಲಂಕಾರ'ಗಳಲ್ಲಿ

''अमी वर्णास्तु विज्ञेया अलङ्कारार्थसिद्धये ।''

ಸ್ತ್ರೀ-ಪುರುಷರು ನಾನಾ ವಿಧವಾದ ಭೂಷಣಗಳಿಂದ ಶೋಭಿಸುವಂತೆ, ವರ್ಣಾಶ್ರಯವಾದ ಗೀತಿಯು 'ಪ್ರಸನ್ನಾದಿ'ಯೇ ಮೊದಲಾದ ಅಲಂಕಾರಗಳಿಂದ ಅಂದಗಾಣುತ್ತದೆ.

33 ಅಲಂಕಾರಗಳನ್ನು ಲಕ್ಷಣ-ಲಕ್ಷ್ಯಯುಕ್ತವಾಗಿ ನೀಡಿರುವುದು ಗ್ರಂಥದ ಮೌಲ್ಯವನ್ನು ಹೆಚ್ಚಿಸಿದೆ. ಭರತೋಕ್ತ ವಿಧಾನದಲ್ಲಿಯೂ ಅಲಂಕಾರಗಳನ್ನು ಹೆಸರಿಸಿ ಅವನ ಒಂದು ಸುಂದರ ಶ್ಲೋಕವನ್ನು ಉದ್ಧರಿಸುತ್ತಾನೆ.

''शशिविरहितेव रजनी विजलेव नदी लता ह्यपुष्पेव ।

अनलङ्कृतेव नारी गीतिरलङ्कारहीना स्यात् ।'

''स्थाने चालङ्कार कुर्यात्'' ಎಂದು ಅಲಂಕಾರಗಳ ಔಚಿತ್ಯಪೂರ್ಣ ಬಳಕೆಯ ಬಗೆಗೆ ಎಚ್ಚರಿಸುತ್ತಾನೆ. ಕೆಲವು ಅಲಂಕಾರಗಳ ಪ್ರಸ್ತಾರವನ್ನು ನೋಡಿ;

| | | |
|---|---|---|
| *ಸರಿರಿಸ - ರಿಗಗರಿ - ಗಮಮಗ - ಮಪಪಮ..* | = | ಪ್ರೇಂಖೋಲಿತ |
| *ನಿರಿಗಮಪರಿ - ಗಮಪದಗ - ಗಮಪದನಿಗ...* | = | ತಾರಮಂದ್ರಪ್ರಸನ್ನ |
| *ಸರಿರಿಸ - ರಿಗರಿಸ - ಸರಿಗಮ ಮಗರಿಸ - ಸರಿಗಮಪ ಪಮಗರಿಸ...* | = | ಪ್ರಸ್ತಾರ |
| *ಸರಿಸರಿ - ರಿಗರಿಗ - ಗಮಗಮ - ಮಪಮಪ ..* | = | ಉಪಲೋಲಕ |
| *ಸನಿಸನಿ - ನಿದನಿದ...* | | |
| *ಸಗರಿಮ - ಗಪಮದ - ಪನಿದಸ ...* | = | ನಿಷ್ಕೂಜಿತ |
| *ದಮದಮ - ಪಗಪಗ - ಮರಿಮರಿ ...* | = | ಹ್ರಾದಮಾನ |
| *ಗಗಮಪ - ಮಮಪದ - ಪಪದನಿ ...* | = | ರಂಜಿತ |
| *ಸಾರೀಗಾ - ರೀಗಾಮಾ - ಗಾಮಾಪಾ ...* | = | ಆಕ್ಷಿಪ್ತಕ |

ಈ ಅಲಂಕಾರಗಳೇ ಮುಂದೆ ಪಂಚದಶವಿಧ ಗಮಕಗಳಲ್ಲೂ ದಶವಿಧ ಗಮಕಗಳಲ್ಲೂ ಕಾಣಿಸಿಕೊಳ್ಳುವುದಲ್ಲದೆ ಸೂಳಾದಿ ತಾಳಗಳಲ್ಲಿನ ಅಲಂಕಾರಗಳ ರಚನೆಗೆ ನಾಂದಿಯಾಯಿತು.

(ಮುಂದುವರಿಯುವುದು)

# ಪೆಚ್ಚು ಮಾಡಿದ ವೀಣೆಯ ಹುಚ್ಚು



ಬಿ.ವಿ.ಕೆ. ಶಾಸ್ತ್ರಿ

ನಾನು ಮೈಸೂರು ಚಾಮರಾಜೇಂದ್ರ ಕಲಾ ಶಾಲೆಯ ವಿದ್ಯಾರ್ಥಿಯಾಗಿದ್ದಾಗ ಅಲ್ಲಿ ಕಲಾವಿದ ವೆಂಕಟಪ್ಪನವರ ಹೆಸರು ಪದೇ ಪದೇ ಪ್ರಸ್ತಾಪವಾಗುತ್ತಿತ್ತು. ಅದರಂತೆ ಅವರು ಏಕಾಂಗಿ, ಮುಂಗೋಪಿ, ನಿಷ್ಠುರವಾದಿ ಹೀಗೆ ಒಂದು ಭಾಗ. ಬಹುಶಿಸ್ತು, ಸೂಕ್ಷ್ಮ, ಎಲ್ಲದರ ಬಗೆಗೂ ಎಚ್ಚರ - ಇದು ಇನ್ನೊಂದು ವರ್ಗ. ಆದರಕ್ಕಿಂತ ಆತಂಕವೇ ಹೆಚ್ಚಾಗುವ ಚಿತ್ರಮೂಡಿ ಬರುತ್ತಿತ್ತು. ನಾವು ಶಾಲೆಗೆ ಬರುವಾಗಲೂ, ಹಿಂತಿರುಗುವಾಗಲೂ, ಮೋತಿ ಖಾನೆಯ ಮುಂದೆ ಬರಬೇಕಾಗಿತ್ತು. ಅಲ್ಲಿ ಮಹಡಿಯ ಮೇಲಿನ ಒಂದು ಕೊಠಡಿಯ ಕಡೆಗೆ ಕೈತೋರುತ್ತಾ, ''ಅದೋ ಅಲ್ಲಿ ವೆಂಕಟಪ್ಪನವರ ವಾಸ'' ಎನ್ನುತ್ತಿದ್ದರು. ನಾನು ಒಂದು ಸಲವೂ ಮಹಡಿಯಲ್ಲಿ ವೆಂಕಟಪ್ಪನವರನ್ನು ಕಾಣಲಾಗಲಿಲ್ಲ. ಆದರೆ ಆ ವ್ಯಕ್ತಿಯನ್ನು ಬೇರೆ ಕಡೆ ನೋಡಲಾಗುತ್ತಿತ್ತು. ಎಂದಾದರೂ ಸಂಜೆ ಕುಕ್ಕುರಹಳ್ಳಿಯ ಕೆರೆ ಏರಿಯ ಮೇಲೆ ಸಂಚಾರ ಹೊರಟಾಗ ವೆಂಕಟಪ್ಪನವರು ಒಂದು ಬೆಂಚಿನ ಮೇಲೆ ಕುಳಿತಿದ್ದುದನ್ನು ಕಾಣಬಹುದಿತ್ತು. ಶುಭ್ರವಾದ ಬಟ್ಟೆ ಧರಿಸಿದ ಬಳಿಯ ಗಿರಿಜಾ ಮೀಸೆಯ ಈ ವ್ಯಕ್ತಿಯ ಗಂಭೀರ ಮುಖವನ್ನು ನೋಡಿದೊಡನೆ ಗೌರವ ಮೂಡಿಬರುತ್ತಿತ್ತು. ಹಾಗೆಯೇ ಮಾತನಾಡಿಸುವ ಧೈರ್ಯವೂ ಹೋಗಿ ಬಿಡುತ್ತಿತ್ತು. ವೆಂಕಟಪ್ಪನವರು ಮೋತಿ ಖಾನೆಯ ಬಿಡಾರದಲ್ಲಿ ಫಲಕಗಳನ್ನು ರಚಿಸುತ್ತಿದ್ದರೆಂದು ಜನಗಳು ಮಾತನಾಡಿಕೊಳ್ಳುತ್ತಿದ್ದರು. ಆದರೆ ಅವುಗಳನ್ನು ನೋಡಲು ನಮಗೆ ಅವಕಾಶ ಸಾಲದು. ಜೊತೆಗೆ ಧೈರ್ಯವೂ ಇರಲಿಲ್ಲ. ಆದರೆ ಅವರ ಬೇರೆಯ ಕಲಾಕೃತಿಗಳನ್ನು ನೋಡಲು ಸಾಧ್ಯವಿತ್ತು. ಅದು - ಜನಗನ್ಮೋಹನ ಅರಮನೆಯ ಚಿತ್ರಶಾಲೆಯಲ್ಲಿ. ಅಲ್ಲಿ ಅವರು ರಚಿಸಿದ ಅನೇಕ ಚಿತ್ರಗಳಿರುವುದಾಗಿ ಹೇಳುತ್ತಿದ್ದರು. ಅವುಗಳಲ್ಲಿ ''ವೀಣೆಯ ಹುಚ್ಚು'' ಎಂಬ ಹೆಸರಿನ ಒಂದು ಚಿತ್ರದ ಪದೇ ಪದೇ ಪ್ರಸ್ತಾಪ ಅದೊಂದು ವಿಚಿತ್ರ ಚಿತ್ರವೆಂದು ಹೇಳಲಾಗುತ್ತಿತ್ತು. ನನಗೆ ಒಂದು ಸಲವಾದರೂ ವೆಂಕಟಪ್ಪನವರ ಚಿತ್ರಗಳನ್ನು ನೋಡಬೇಕೆಂಬ ಆಸೆ. ಆದರೆ ಒಳಕ್ಕೆ ಹೋಗಲು ಟಿಕಿಟು ಎಂಟಾಣೆ ಎಂದು ಕೇಳಿಬಂತು. ಅಷ್ಟು ಕೊಡಲು ಶಕ್ತಿ ಇರಲಿಲ್ಲ.

ಹೀಗಿರಲು ಒಂದು ದಿನ ನಮ್ಮ ಮೇಷ್ಟ್ರು ಕೇಶವಯ್ಯನವರು ''ನಾನು ಜಗನ್‌ಮೋಹನ್ ಪ್ಯಾಲೆಸ್‌ಗೆ ಹೋಗಬೇಕಾಗಿದೆ. ಯಾರಾದರೂ ಜೊತೆಗೆ ಬರ್ತೀರಾ?'' ಎಂದು ಕೇಳಿದರು. ನಮ್ಮ ತರಗತಿಯವರಿಗೆ ಸಂತೋಷ, ಎಲ್ಲರೂ ಬರುತ್ತೇವೆ ಎಂದು ಮುಂದಾದರು. ಆದರೆ ಕೇಶವಯ್ಯನವರು ಕೇವಲ ಇಬ್ಬರನ್ನು- ನಾನು ಮತ್ತು ಇನ್ನೊಬ್ಬ ವಿದ್ಯಾರ್ಥಿಯನ್ನು ಜೊತೆಗೆ ಕರೆದುಕೊಂಡು ಹೋದರು. ನಾನು ಆ ಮೊದಲು ಹೊರಗಡೆಯಿಂದ ನೋಡಿದ್ದೇನೇ ವಿನಾ ಜಗನ್ಮೋಹನ ಪ್ಯಾಲೆಸ್ ಒಳಗೆ ನೋಡಿರಲಿಲ್ಲ. ಅಲ್ಲಿ ತೂಗುಹಾಕಿದ್ದ ಚಿತ್ರಗಳನ್ನು ಒಂದೊಂದಾಗಿ ನೋಡಿ ಮುಂದೆ ಹೋಗಲು ಪ್ರಾರಂಭ. ಕೇಶವಯ್ಯನವರು ಯಾವದೋ ಆಫೀಸ್ ಕೆಲಸದ ವಿಷಯವಾಗಿ ಬಂದುದರಿಂದ ನಮಗೆ ಸ್ವಲ್ಪ ಸುತ್ತಾಡಿ ಕಾಲ ಕಳೆಯಲು ಅವಕಾಶ ಸಿಕ್ಕಿತು. ಹಾಗೇ ಒಂದೊಂದು ಚಿತ್ರವನ್ನೂ ನೋಡುತ್ತಾ, ಒಂದು ಹಜಾರದಿಂದ ಇನ್ನೊಂದಕ್ಕೆ ಬರುತ್ತಾ, ವೆಂಕಟಪ್ಪನವರ ಚಿತ್ರಗಳಿದ್ದ ಕೊಠಡಿಗೆ ಬಂದೆನು. ಅಲ್ಲಿ ಒಂದೊಂದಾಗಿ ನೋಡುತ್ತಾ ಈ ವೀಣೆಯ ಹುಚ್ಚು ಚಿತ್ರದ ಬಳಿ ಬಂದು ನಿಂತೆನು.

ಶಾಲೆಯಲ್ಲಿ ಹೇಳುತ್ತಿದ್ದಂತೆ ಅದೊಂದು ವಿಚಿತ್ರ ರೀತಿಯ ಚಿತ್ರವೇ ಸರಿ. ತೆಳುವಾದ ವರ್ಣಛಾಯೆ. ಎಡಗಡೆ ಮೂಲೆಯಲ್ಲಿ ಒಂದು ದೊಡ್ಡ ವೀಣೆ. ಅದರ ಪಕ್ಕದಲ್ಲಿ ಒಬ್ಬ ಹೆಂಗಸು ವೀಣೆಯ ಅಧಿದೇವತೆ ಇರಬಹುದೆಂದುಕೊಂಡೆ. ಬಲಗಡೆ ಒಂದು ಸ್ಥಂಬ. ಅದರ ಮೇಲೆ ಒಂದು ಶಿಲ್ಪ-ಬಸ್ಟ್, ಅದರ ಕೆಳಗೆ ಒಬ್ಬ ಹೆಂಗಸು ಕಂಬಕ್ಕೆ ಕಟ್ಟಿ ಹಾಕಲಾಗಿದೆ. ಕೈಯಲ್ಲಿ ಕುಂಚಗಳು. ಪಕ್ಕದಲ್ಲಿ ನೆಲದ ಮೇಲೆ ಬಣ್ಣಗಳ

ಪೆಟ್ಟಿಗೆ ತೆರೆದು ಬಿದ್ದಿದೆ. ಈ ಮಧ್ಯೆ ನೆಲದ ಮೇಲೆ ಮಂಡಿಯನ್ನು ಹಿಂದಕ್ಕೆ ಚಾಚಿ ಎರಡೂ ಕೈಗಳನ್ನು ಎತ್ತಿ ಬೇಡಿಕೊಳ್ಳುವ ರೀತಿಯಲ್ಲಿ ವಿಚಿತ್ರವಾದ ಪರ್ಕಪರ್ಕಲಾದ ಮನುಷ್ಯ. ಈ ವಿನ್ಯಾಸ ನಮಗೆ ಪಾಠವಾಗುರ ರೀತಿಯಲ್ಲಿ ಇರದೇ ವಿಚಿತ್ರವಾಗಿತ್ತು. ಶಾಲೆಗೆ ಹಿಂತಿರುಗಿದ ನಂತರ ಕೆಲವು ದಿನ ಈ ಚಿತ್ರವು ಪದೇ ಪದೇ ಸ್ಮರಣೆಗೆ ಬರುತ್ತಿತ್ತು. ಕ್ರಮೇಣ ಮರೆತು ಹೋಯಿತು. ಕೆಲವು ವರುಷಗಳ ನಂತರ ಪುನಃ ಅದನ್ನು ನೋಡುವ ಸಂದರ್ಭ ಬಂದಿತು - ಯಾವುದೋ ಮಾಸ ಪತ್ರಿಕೆಯಲ್ಲಿ. ಆಗ ಈ ಚಿತ್ರ ರಚನೆಯಾದ ಸಂದರ್ಭದ ಬಗೆಗೆ ಕೆಲವು ವಿವರಗಳಿದ್ದುವು. ವೆಂಕಟಪ್ಪನವರು ಮೈಸೂರಿಗೆ ಹಿಂತಿರುಗಿದ ನಂತರ ಅವರಿಗೆ ವೀಣೆಯ ಕಲಿಕೆಯ ಮೇಲೆ ತೀವ್ರ ಆಸಕ್ತಿ ಹೆಚ್ಚಿ, ಚಿತ್ರಕಲಾಭ್ಯಾಸವನ್ನು ಬದಿಗಿಟ್ಟದ್ದನ್ನು ಕೇಳಿದ ಅವರು ಗುರುಗಳಾದ ಅವನೀಂದ್ರನಾಥ ಠಾಕೂರರು ಆಕ್ಷೇಪಿಸಿ ಪತ್ರ ಬರೆದರೆಂದೂ, ಅದಕ್ಕೆ ವೆಂಕಟಪ್ಪನವ ಪ್ರತಿಕ್ರಿಯೆ ಈ ಚಿತ್ರವೆಂದು ಈ ವಿವರಣೆಯಿಂದ ತಿಳಿದು ಬಂದುದು ಅಲ್ಲಿ ಸ್ಥಂಬದ ಮೇಲಿನ ಪ್ರತಿಮೆ ಅವನೀಂದ್ರದೆಂದೂ, ಕೈ ಎತ್ತಿ ಬೇಡುವ ವ್ಯಕ್ತಿ ವೆಂಕಟಪ್ಪನವರೆಂದು ಹೇಳಲಾಗಿತ್ತು. ಮುಂದೆ ಅವರು ಮೈಸೂರು ಬಿಟ್ಟು ಬೆಂಗಳೂರು ಸೇರಿ ಅಲ್ಲಿಯೇ ನೆಲೆಸಿದುದು ಎಲ್ಲರೂ ಬಲ್ಲ ವಿಷಯವೇ.

1960ರಲ್ಲಿ ನಾನು ಬೆಂಗಳೂರಿನಲ್ಲಿ ನೆಲೆಸಿ ಪತ್ರಿಕೆಗಳಿಗೆ ಕಲೆಯ ಬಗೆಗೆ ಲೇಖನಗಳನ್ನು ಬರೆಯಲು ಪ್ರಾರಂಭಮಾಡಿದ ಮೇಲೆ ಆಗಾಗ್ಗೆ ವೆಂಕಟಪ್ಪನವರ ಪ್ರಸ್ತಾಪವೂ ಬರುತ್ತಿತ್ತು. ಆದರೆ ತಪಸ್ಸಿನಲ್ಲಿದ್ದ ಋಷಿಯಂತಿದ್ದ ವೆಂಕಟಪ್ಪನವರನ್ನು ಸಂಧಿಸಲು ಸಾಧ್ಯವಾಗಲಿಲ್ಲ. ಆ ಅವಕಾಶ ದೊರೆತುದು 1962ರಲ್ಲಿ ಅವರಿಗೆ ಕೇಂದ್ರ ಲಲಿತಕಲಾ ಅಕಾಡೆಮಿ ಫೆಲೋಷಿಪ್ ನೀಡಿದ ಸಂದರ್ಭದಲ್ಲಿ. ಸಮಾರಂಭ ಅವರ ಮನೆಯಲ್ಲಿಯೇ ನಡೆಯಿತು. ಸಮಾಜದ ಹಾಗೂ ಕಲಾಕ್ಷೇತ್ರದ ಗಣ್ಯರೆಲ್ಲಾ ನೆರೆದಿದ್ದರು. ವೆಂಕಟಪ್ಪನವರನ್ನು ಕೈಹಿಡಿದು ನಿಧಾನವಾಗಿ ಕರೆತರಲಾಯಿತು. ನಡೆಯಲೂ ಶಕ್ತಿ ಇಲ್ಲದಂತೆ ಕಾಣಬಂದರು. ಅವರ ಆರೋಗ್ಯ ಸರಿ ಇಲ್ಲವೆಂದು ತಿಳಿದುಬಂದಿತು. ಮತ್ತು ಮನೆಯಿಂದ ಹೊರಗೆ ಹೋಗಲಾರದಷ್ಟು ನಿಶ್ಶಕ್ತಿ ಎಂದು ಹೇಳುತ್ತಿದ್ದರು. ಮುದೆ ಹಾಸಿಗೆ ಹಿಡಿದರೆಂಬ ವದಂತಿ. ನನ್ನ ಇತರ ಕೆಲಸಗಳ ಮಧ್ಯೆ ವೆಂಕಟಪ್ಪನವರೂ ಮರೆತುಹೋದರು.

1963ರಲ್ಲಿ ನನ್ನ ಮಿತ್ರ ಎನ್.ಎಸ್. ಸೀತಾರಾಮ ಶಾಸ್ತ್ರಿಗಳು ''ಕೈಲಾಸ'' ಮಾಸಪತ್ರಿಕೆಯ ಸಂಪಾದಕರಾದರು. ಅದರಲ್ಲಿ ಕಲಾಕ್ಷೇತ್ರಕ್ಕೆ ಸಂಬಂಧಿಸಿದ ಚಾರ್ಟ್‌ಗಳನ್ನು ಬರೆಯಬೇಕೆಂದು ನನ್ನನ್ನು ಕೇಳಿಕೊಂಡರು. ಯಾವ ವಿಷಯಗಳನ್ನು ಆರಿಸಬಹುದು ಎಂದು ನಾವು ಚರ್ಚಿಸುತ್ತಿದ್ದಾಗ, ವೆಂಕಟಪ್ಪನವರ ಹಾಗೂ ಅವರ ''ವೀಣೆಯ ಹುಚ್ಚು'' ಚಿತ್ರದ ಪ್ರಸ್ತಾಪ ಬಂದಿತು. ಅದರ ವಿಷಯವನ್ನೇ ಏಕೆ ಬರೆಯಬಾರದು ಎಂದರು - ಸೀತಾರಾಮ ಶಾಸ್ತ್ರಿಗಳು. ಸರಿ ಎಂದು ಬರೆಯಲು ಪ್ರಾರಂಭಿಸಿದೆ. ಆದರೆ ಒಂದು ತೊಡಕು. ಚಿತ್ರವನ್ನು ನೋಡಿ ಬಹುಕಾಲವಾಗಿತ್ತು, ವಿವರಗಳೂ ಮರೆತುಹೋಗಿದ್ದುವು. ಆದರೂ ಧೈರ್ಯವಾಗಿ ನೆನಪಿನಿಂದ ಅದನ್ನು ವಿವರವಾಗಿ ಪ್ರಸ್ತಾಪಿಸಿದೆ. ಪ್ರಕಟವೂ ಆಯಿತು. ಅನೇಕರು ಮೆಚ್ಚುಗೆ ಸೂಚಿಸಿದರು. ಬಹು ಮಂದಿಯ ಮೆಚ್ಚುಗೆ ಕಲಾವಿದನನ್ನು ಕುರಿತು, ಚಿತ್ರದ ವಿವರಗಳನ್ನಲ್ಲ. ಈ ಮಧ್ಯೆ ಒಂದು ಪತ್ರವು ವಿಶೇಷವಾಗಿ ಗಮನ ಸೆಳೆಯಿತು ಅದರ ಒಕ್ಕಣೆ.

ನನ್ನ ಸೋದರ ಮಾವಂದಿರಾದ ಶ್ರೀ ಕೆ. ವೆಂಕಟಪ್ಪನವರ ಬಗ್ಗೆ ಶ್ರೀ ಬಿ.ವಿ.ಕೆ. ಶಾಸ್ತ್ರಿಗಳು 'ಕೈಲಾಸ'ದ ಪ್ರಥಮ ಸಂಚಿಕೆಯಲ್ಲಿ ಲೇಖನ ಬರೆದಿರುವುದನ್ನು ಪೂಜ್ಯರು ಕೇಳಿ ಸಂತೋಷಪಟ್ಟರು. ಆದರೆ ಶ್ರೀ ವೆಂಕಟಪ್ಪನವರ ಹೆಸರಾಂತ ಕೃತಿ ''ವೀಣೆಯ ಹುಚ್ಚು'' ಕುರಿತು ಶ್ರೀ ಶಾಸ್ತ್ರಿಗಳು ಬರೆದಿರುವ ವಿವರ ಮಾತ್ರ ಸರಿತೋರದು. ''ಕಟ್ಟಿಹಾಕಲ್ಪಟ್ಟ ಕಲಾವಿದನೊಬ್ಬನನ್ನು ವೀಣೆಯು ಆದರದಿಂದ ಆಹ್ವಾನಿಸುತ್ತಿರುವ ದೃಶ್ಯವದು'' ಎಂದಿರುವುದು ತಪ್ಪಾಗಿ ಕಲ್ಪಿತವಾಗಿದೆ. ಅಲ್ಲಿ ಕಲಾವಿದನನ್ನು ಕಟ್ಟಿಹಾಕಿಲ್ಲ. ಕಲಾದೇವಿಯನ್ನು ಕಟ್ಟಿಹಾಕಲಾಗಿದೆ. ತಪ್ಪು ಕಲ್ಪನೆಯನ್ನು ತಿದ್ದುವುದು ಒಳ್ಳೆಯದೆಂದು ವಿನಯದಿಂದ ಕೇಳಿಕೊಳ್ಳುತ್ತೇನೆ -ಕೆ. ರಾಮರಾಜು, ಮಲ್ಲೇಶ್ವರ.

ಹಾಸಿಗೆ ಹಿಡಿದು ಮಲಗಿದ್ದ ವೆಂಕಟಪ್ಪನವರಿಗೆ, ಓದುವ ಆಸಕ್ತಿಯಾಗಲೀ, ಅದರಲ್ಲಿಯೂ ಅಂದು ಇನ್ನೂ ಪ್ರಚಾರಕ್ಕೆ ಬರದಿದ್ದ ''ಕೈಲಾಸ'' ಪತ್ರಿಕೆಯನ್ನು ಓದುವ ಸಂದರ್ಭವಾಗಲೀ ನಿರೀಕ್ಷಿಸಲಾಗದ ವಿಷಯಗಳು. ಅನಿರೀಕ್ಷಿತ ಘಟನೆಗಳಲ್ಲಿ ಇದೂ ಒಂದು ಎನ್ನಬಹುದು. ಆದರೆ ಶರೀರ ದುರ್ಬಲವಾದರೂ, ಮನಸ್ಸಿನ ಮೌಲ್ಯಾಧಾರಿತ ಪರಿಪಕ್ವ ಭಾವನೆ, ಅದರ ಸೂಕ್ಷ್ಮ ಸ್ವಭಾವ, ಮಿಗಿಲಾಗಿ ಅಂತರ್ಗತವಾಗಿದ್ದ ಕಾವು ಇವುಗಳಿಗೆ ಯಾವ ಮುಪ್ಪೂ ಬಂದಿಲ್ಲವೆನಿಸಿತು. ಲೇಖನವನ್ನು ಪುನಃ ಪರಿಶೀಲಿಸಿದಾಗ, ವಿವರಣೆಯಲ್ಲಿ, ವ್ಯಕ್ತಿಗಳ ಅದಲು ಬದಲಾಗಿರುವುದು ಕಂಡುಬಂದಿತು. ಯಾರೂ ಅಷ್ಟಾಗಿ (ನಾನೂ ಸೇರಿ) ಗಮನಿಸದ ಅಥವಾ ಹಚ್ಚಿಕೊಳ್ಳದ ಈ ಲೋಪವು ನಿಶ್ಯಕ್ತರಾಗಿ ಹಾಸಿಗೆ ಹಿಡಿದಿದ್ದರೂ, ವೆಂಕಟಪ್ಪನವರಿಗೆ ಸಹಿಸಲಾಗಲಿಲ್ಲ. ಅದು ವೆಂಕಟಪ್ಪನವರಲ್ಲಿದ್ದ ನಿಜ ಕಲಾತ್ಮಕತೆಯ ಲಕ್ಷಣ. ■

## ಗೀತ-ಶಾಸ್ತ್ರ ಸಿಂಚನ

**ಈ ಮಾಲಿಕೆಯ ಮೊದಲನೇ ಕಾರ್ಯಕ್ರಮವನ್ನು**

**ಸಂಗೀತ ಕಲಾನಿಧಿ ಶ್ರೀ ಆರ್.ಕೆ. ಶ್ರೀಕಂಠನ್**

**ಮತ್ತು**

**ವಿದ್ವಾನ್ ಆರ್.ಎಸ್. ರಮಾಕಾಂತ್‌ರವರು ನಡೆಸಿಕೊಡುವರು.**

**ಭಾನುವಾರ, 13ನೇ ಡಿಸೆಂಬರ್ 1998 ಬೆಳಿಗ್ಗೆ 10.30ಕ್ಕೆ**

*ಸ್ಥಳ : ಅನನ್ಯ ಸಭಾಂಗಣ*

ಎಲ್ಲರಿಗೂ ಆದರದ ಸ್ವಾಗತ

★ ★ ★

ಕಲೆಗಳಲ್ಲೆಲ್ಲಾ ಸಂಗೀತವೇ ಅತ್ಯಂತ ಪ್ರಾಚೀನವೂ, ಪ್ರಭಾವಶಾಲಿಯೂ ಆಗಿರುವ ಕಲೆ. ಭಾರತೀಯರು ಅದನ್ನೊಂದು ಅಲೌಕಿಕ ವಿದ್ಯೆಯೆಂದು ದೈವಿಕವಾದ ಹಿನ್ನೆಲೆಯಲ್ಲಿ ಬೆಳೆಸಿಕೊಂಡು ಬಂದಿದ್ದಾರೆ.

ರಾಗ-ಶಕ್ತಿ-ಭಾವ-ಭಕ್ತಿ-ತಾಳ-ಕಾಲಗಳೇ ಸಂಗೀತ ಕಲೆಯ ಜೀವಾಳವೂ, ಮೂಲವೂ ಆಗಿವೆ. ಇವುಗಳಿಗೆ ಪೂರಕವಾಗಿ ಧಾತು-ಮಾತುಗಳ ಸಾಂಗತ್ಯವು ರಾಗ ಸೌಂದರ್ಯ ಪ್ರಕಟಣೆಗೂ, ರಸಾಸ್ವಾದನೆಗೂ ಅತ್ಯಂತ ಸಹಕಾರಿ. ಕರ್ಣಾಟಕ ಸಂಗೀತ ವಿಶಿಷ್ಟವೂ, ಪರಿಪೂರ್ಣವೂ ಆದ ಪದ್ಧತಿ. ಇದರ ವಿಸ್ತಾರ, ವೈವಿಧ್ಯ ಮತ್ತು ಸೌಂದರ್ಯ ಅನುಪಮವಾದದ್ದು. ಸಂಗೀತ ತ್ರಿಮೂರ್ತಿಗಳ ಕೃತಿಗಳಲ್ಲಿ ರಾಗ ಸ್ವರೂಪಕ್ಕೂ, ರಚನಾ ಸೌಂದರ್ಯಕ್ಕೂ ಪ್ರಾಧಾನ್ಯ. ಈ ಗುಣಗಳ ವಿಶ್ಲೇಷಣೆಯ ಬಗೆಗೆ ಪ್ರಾತ್ಯಕ್ಷತೆ.

# ಸುಗಮ ಸಂಗೀತ - ಸಂಗೀತ ಸಂಯೋಜನೆ



- ವಿಜಯ ಹಾವನೂರು

ಭಾರತೀಯ ಸಂಗೀತ ಪ್ರಕಾರಗಳಲ್ಲಿ ಸುಗಮ ಸಂಗೀತಕ್ಕೆ ತನ್ನದೇ ಆದ ಸ್ಥಾನವಿದೆ. ನಿರ್ಧಿಷ್ಟವಾದ ರೂಪವಿದೆ. ಸುಂದರವಾದ ಚೌಕಟ್ಟಿದೆ. ಅಂತೆಯೇ ತಳಹದಿಯೂ ಇದೆ. ಕವಿಕೃತಿಯು ಓದುಗ ಅಥವಾ ಕೇಳುಗನನ್ನು ಸುಲಲಿತವಾಗಿ ಮನಮುಟ್ಟುವ ಸುಂದರ ಸೇತು 'ಸುಗಮ ಸಂಗೀತ'. 'ಶಾಸ್ತ್ರೀಯ ಸಂಗೀತ ಮತ್ತು ಚಲನಚಿತ್ರ ಸಂಗೀತ' ಇವೆರಡರ ನಡುವೆ ಇರಬಹುದಾದ ಚೇತೋಹಾರಿಯಾದ ಸಂಗೀತ ಪ್ರಕಾರವೇ ಸುಗಮ ಸಂಗೀತ ಪ್ರಕಾರ' ಎಂದು ಸ್ಥೂಲವಾಗಿ ಹೇಳಬಹುದು.

ಸುಗಮ ಸಂಗೀತದಲ್ಲಿ ಸಂಗೀತ ಸಂಯೋಜನೆ ಹೇಗಿರಬೇಕು ಎಂದರೆ, ಕವಿಯ ಭಾವವನ್ನು ಕೇಳುಗನಿಗೆ ತಲುಪಿಸುವ ಉದ್ದೇಶವನ್ನು ಹೊಂದಿ, ಶಾಸ್ತ್ರೀಯ ಸಂಗೀತದ ಮಜಲುಗಳನ್ನು ಸುಗಮಗೊಳಿಸಿ ಅದರಲ್ಲಿ ಭಾವಪೋಷಕವಾದ ಜೀವಸ್ವರಗಳನ್ನು ಸಂಸ್ಕೃತಗೊಳಿಸಿ ಅಳವಡಿಸಬೇಕು. ಇಲ್ಲಿ ಶ್ರೋತೃವೇ ಪ್ರಧಾನ. ರಸಪುಷ್ಟಿಯೇ ಅಂತಿಮ ಗುರಿ.

ಮೊಟ್ಟಮೊದಲು ಸಂಗೀತ ಸಂಯೋಜನೆಗೆ ಆರಿಸಿಕೊಳ್ಳುವ ಕವನವು ಹೇಗಿರಬೇಕು? ಇದು ಬಹು ಮುಖ್ಯ.

ಕವನವು ಗೇಯ ಗುಣದಿಂದ ಕೂಡಿರಬೇಕು. ಶ್ರುತಿ ಕಟುತ್ವ ಮೊದಲಾದ ದೋಷಮುಕ್ತ ವಾಗಿರಬೇಕು. ಲಾಲಿತ್ಯ-ಮಾಧುರ್ಯ ಮುಂತಾದ ಕಾವ್ಯಗುಣಗಳಿಂದ ಕೂಡಿರಬೇಕು. ಸಂಗೀತ ಸಂಯೋಜಕನಿಗೆ ತಾನು ಸಂಯೋಜಿಸುವ ಕವನದ ಸಮಗ್ರ (Concept) ಪರಿಕಲ್ಪನೆ ಇರಬೇಕು.

ಇವಿಷ್ಟು ಮೂಲಭೂತ ಅಂಶಗಳೊಂದಿಗೆ ಸಂಗೀತ ಸಂಯೋಜನೆಗೆ ಮುಂದಾದಾಗ ಎಲ್ಲಿಯೂ ಸಂಗೀತವೇ ಪ್ರಧಾನವಾಗಬಾರದು. ಭಾವಾಭಿವ್ಯಕ್ತಿಯೇ ಮುಖ್ಯ. ಕವಿ ತನ್ನ ಕಾವ್ಯದಲ್ಲಿ ಏನನ್ನು ಹೇಳಲು ಹೊರಟಿದ್ದಾನೋ ಅದನ್ನು ಸಂಗೀತದ ಮೂಲಕ ಇನ್ನಷ್ಟು ಪರಿಣಾಮಕಾರಿಯಾಗಿ ಮುಟ್ಟಿಸುವ ಹೊಣೆಗಾರಿಕೆ ಸಂಗೀತ ಸಂಯೋಜಕ ಮತ್ತು ಗಾಯಕನದ್ದಾಗಿರುತ್ತದೆ. ಸಂಗೀತವು ಹಾಲಿಗೆ ಸಕ್ಕರೆಯಿದ್ದಂತೆ. ಸಕ್ಕರೆ ಇಲ್ಲದೇ ಹಾಲನ್ನು ಕುಡಿಯಬಹುದು. ಸಕ್ಕರೆಯಿಂದ ಮಿಶ್ರಿತವಾದ ಹಾಲು ಮತ್ತಷ್ಟು ರುಚಿವರ್ಧಕ. ಹಾಲಿಗೆ ಸಕ್ಕರೆ ಹೆಚ್ಚಾದರೆ ಹಾಲೂ ಸಹ ಹೇಗೆ ಅಹಿತವಾಗುವುದೋ ಅದರಂತೆ ಕವಿತೆಗಿಂತ ಸಂಗೀತವೇ ಮೇಲುಗೈಯಾದಾಗ ಭಾವ ಸಪ್ಪೆಯಾಗುತ್ತದೆ. ಈ ದಿಶೆಯಲ್ಲಿ ಸಂಗೀತವು ಕವನದ ಭಾವಪುಷ್ಟಿಯನ್ನು ಮಾಡುವುದಷ್ಟೇ ಪರಮ ಗುರಿಯುಳ್ಳದ್ದಾಗಿರಬೇಕು. ಹೀಗೆ ಭಾವಾನುಸಾರೀ ರಾಗ-ತಾಳ ಮತ್ತು ಗತಿ ಇರಬೇಕು. ಇಲ್ಲಿ ಆಲಾಪನೆಯಾಗಲೀ, ಸ್ವರ, ಗಮಕ ಅಥವಾ ಪದವಿನ್ಯಾಸ ಇದಾವುದೂ ಮುಖ್ಯವಲ್ಲ. ಇದಾವುದೇ ಬಂದರೂ ಭಾವಾಭಿವ್ಯಕ್ತಿಗೆ ಮತ್ತು ರಸಪುಷ್ಟಿಗೆ ಪೋಷಕವಾಗಿ ಬರಬೇಕು. ಸುಗಮ ಸಂಗೀತದಲ್ಲಿ - ರಾಗದಲ್ಲಿ ಸೇರದ ಅನ್ಯ ಸ್ವರಮಿಶ್ರಣ ಅನಿವಾರ್ಯವೇನಲ್ಲ. ಭಾವಪೋಷಕವಾಗಿ ಅನ್ಯ ಸ್ವರ ಸೇರ್ಪಡೆಯಾಗುವುದಾದರೆ ಮಾತ್ರ ಅದು ಅಪೇಕ್ಷಣೀಯ. ಭಾಷೆಯ ಸೊಗಡಿಗೆ ಅನುಗುಣವಾದಂತಹ ಅನನ್ಯವಾದ ರೀತಿಯಲ್ಲಿ ಸಂಗೀತವನ್ನು ಸಂಯೋಜಿಸಿದಾಗ ಮಾತ್ರ ಶ್ರೋತೃ ಭಾವಲೀನನಾಗುತ್ತಾನೆ, ಚರ್ವಣ ಮಾಡುತ್ತಾನೆ.

ಕೊನೆಗೊಂದು ಮಾತು ಹೇಳಲೇಬೇಕು. ಸ್ವರ ಸಂಯೋಜಕನ ಹೊಣೆಗಾರಿಕೆ ಅತ್ಯಮೂಲ್ಯವಾದದ್ದು. ಸಂಗೀತ ಸಂಯೋಜಕನು ತಾನು ಸಂಯೋಜಿಸುವ ಸಂಗೀತದ ಕುರಿತು ದೂರದೃಷ್ಟಿ ಹೊಂದಿರಬೇಕು. ಪ್ರಸಿದ್ಧ ಸಂಗೀತಗಾರನಿಂದ ಸಂಯೋಜಿತವಾದ ಗೀತೆಯು ಮಾಧ್ಯಮಗಳ ಮೂಲಕ ಸಾರ್ವತ್ರಿಕವಾಗಿ ಬಿತ್ತರಗೊಳ್ಳುತ್ತದೆ. ಸಂಗೀತಗಾರನ ಜಾಣ್ಮೆಯಿಂದ ನೀರಸ ಕವನವೂ ಅತಿ ಪ್ರಸಿದ್ಧವಾಗಬಹುದು. ಅತ್ಯುತ್ತಮ ಕವಿತೆಯೂ ಸಮುಚಿತವಲ್ಲದ ಸಂಗೀತ ಸಂಯೋಜನೆಯಿಂದ ನೀರಸವೆನಿಸಬಹುದು. ಈ ನಿಟ್ಟಿನಲ್ಲಿ ಸ್ವರ ಸಂಯೋಜಕನು ಪರಂಪರೆಯ ಪ್ರವರ್ತಕನಾಗಿ ಹೊಣೆಗಾರಿಕೆಯನ್ನು ಅರಿತು ಸಂಗೀತ ಸಂಯೋಜನ ಮಾಡಬೇಕು.

# ಅನನ್ಯ ವಾರ್ತೆ



ಅನನ್ಯದ ಆಶ್ರಯದಲ್ಲಿ ದಿನಾಂಕ 15-11-98ರಂದು ಕನ್ನಡ ರಾಜ್ಯೋತ್ಸವದ ನಿಮಿತ್ತ ವಿಶೇಷ ಸುಗಮ ಸಂಗೀತ ಕಾರ್ಯ-ಕ್ರಮವನ್ನು ಯೋಜಿಸಲಾಗಿತ್ತು.

ಸುಗಮ ಸಂಗೀತ ಕ್ಷೇತ್ರದ ಖ್ಯಾತನಾಮರಾದ ಶ್ರೀಮತಿ ರತ್ನಮಾಲಾ ಪ್ರಕಾಶ್, ಶ್ರೀಮತಿ ಮಾಲತೀ ಶರ್ಮಾ ಮತ್ತು ಶ್ರೀ ರಾಜು ಅನಂತಸ್ವಾಮಿಯವರು ಅಪೂರ್ವವಾದ ರೀತಿಯಲ್ಲಿ ಸಂಗೀತ ಕಾರ್ಯಕ್ರಮವನ್ನು ನಡೆಸಿಕೊಟ್ಟರು.

'ಜಯ ಭಾರತ ಜನನಿಯ ತನುಜಾತೆ', 'ಇಳಿದು ಬಾ ತಾಯೆ', 'ಬದುಕು ಜಟಕಾಬಂಡಿ', 'ಕುರಿಗಳು ಸಾರ್', 'ರತ್ನನ ಪದಗಳು' ಹೀಗೆ ಒಂದೊಂದು ಗೀತೆಯೂ ರಾಜುರವರ ಕಂಠದಲ್ಲಿ ಮನಮೋಹಕವಾಗಿ ಹೊರಹೊಮ್ಮುತ್ತ, ಮೈಸೂರು ಅನಂತಸ್ವಾಮಿಯವರನ್ನು ನೆನಪಿಸುತ್ತಿದ್ದರೂ ತಮ್ಮ ಸೃಜನಶೀಲತೆಯಿಂದ ರಾಜುರವರು ಜನಮನ ಗೆದ್ದರು.

ರತ್ನಮಾಲಾ ಹಾಗೂ ಮಾಲತಿಯವರು ಎಂದಿನಂತೆ ತನ್ಮಯತೆಯಿಂದ 'ಯಾವ ಮೋಹನ ಮುರಲಿ ಕರೆಯಿತು', 'ಎಲ್ಲಿ ಜಾರಿತೋ' ಈ ಗೀತೆಗಳನ್ನು ಹಾಡಿ ಭಾವರಸಿಕರನ್ನು ತೋಷಗೊಳಿಸಿದರು. ಪ್ರವೀಣ ಡಿ. ರಾವ್‌ರವರು ಅತ್ಯುತ್ತಮ ತಬಲಾ ಸಹಕಾರ ನೀಡಿದರು.

ದಿನಾಂಕ 28-11.1998ರಂದು ಅನನ್ಯ, ಎಂ.ಇ.ಎಸ್. ಕಲಾವೇದಿ ಮತ್ತು ಆದರ್ಶ ಸಾಂಸ್ಕೃತಿಕ ಸಂಸತ್‌ನ ಸಂಯುಕ್ತ ಆಶ್ರಯದಲ್ಲಿ, ಎಂ.ಇ.ಎಸ್. ಕಾಲೇಜು ಸಭಾಂಗಣದಲ್ಲಿ 'ದಾಸಪುರಂದರ' ನಾಟಕ ಕಾರ್ಯಕ್ರಮ ನಡೆಯಿತು.



ಶ್ರೀಮತಿ ಗೀತಾ ರಾಮಾನುಜಂರವರು ರಚಿಸಿದ ಈ ನಾಟಕದಲ್ಲಿ ಪುರಂದರ ದಾಸರ ಪಾತ್ರವನ್ನು ಅಭಿನಯಿಸಿದ ವಿದ್ವಾನ್ ಆರ್.ಕೆ. ಪದ್ಮನಾಭರವರು ಸಂಗೀತವನ್ನು ಸಂಯೋಜಿಸಿದ್ದರು.

–ಪ್ರತ್ಯಕ್ಷದರ್ಶಿ

# ANANYA CALENDAR-1999
## GML Series-5

ಪ್ರತಿ ವರ್ಷದಂತೆ ಈ ವರ್ಷವೂ 'ಅನನ್ಯ' ಸಂಸ್ಥೆಯು ವಿಷಯಾಧಾರಿತ ಕ್ಯಾಲೆಂಡರನ್ನು ಹೊರತರುತ್ತಿದೆ. 1999ರ ಜಿ.ಎಂ.ಎಲ್. ಮಾಲಿಕೆ-5, ದೇಶದ ಪ್ರಸಿದ್ಧ ಹಿಂದೂಸ್ಥಾನಿ ಸಂಗೀತಗಾರರ ಭಾವಚಿತ್ರ ಹಾಗೂ ಮಾಹಿತಿಯನ್ನು ಒಳಗೊಂಡಿರುತ್ತದೆ. ಪ್ರಸಕ್ತ ಸಾಲಿನ ಕ್ಯಾಲೆಂಡರ್ ಶ್ರೀ ಬಿ.ವಿ.ಕೆ. ಶಾಸ್ತ್ರಿಯವರ ಮಾರ್ಗದರ್ಶನದಲ್ಲಿ ಹೊರಬರುತ್ತಿದೆ.

ಕ್ಯಾಲೆಂಡರ್‌ನ ಬಿಡುಗಡೆ ಸಮಾರಂಭವು ಡಿಸೆಂಬರ್ ತಿಂಗಳ ಕೊನೆಯ ವಾರದಲ್ಲಿ ನಡೆಯಲಿದ್ದು, ಪತ್ರಿಕೆಗಳ ಮುಖೇನ ತಮಗೆ ತಿಳಿಸಲಾಗುವುದು.

**ANANYA, GML Cultural Academy** is bringing out a thematic calendar. This GML Series-5, for 1999, features portraits and write-up on twelve Well Known Hindustani Musicians under the guidance of Sri B.V.K. Shastry. The calendar will be released by the end of December. This will be intimated through News Papers.

### ಅನನ್ಯ-ಜಿ.ಎಂ.ಎಲ್. ಮಾಲಿಕೆಯ ಹಿಂದಿನ ವರ್ಷಗಳ ಕ್ಯಾಲೆಂಡರ್‌ಗಳು

# ಕರ್ನಾಟಕ ಸಂಗೀತ ರಸಪ್ರಶ್ನೆ ಕಾರ್ಯಕ್ರಮ

ರಸಪ್ರಶ್ನೆ ಕಾರ್ಯಕ್ರಮಕ್ಕೆ ಉತ್ಸಾಹಕರ ಪ್ರತಿಕ್ರಿಯೆ ಬರುತ್ತಿದ್ದು ನಮಗೆ ಉತ್ತೇಜನ ನೀಡಿದೆ. ಇದರಲ್ಲಿ ಸಂಗೀತಗ್ರಂಥ, ಕೃತಿ, ಕರ್ತೃ, ರಾಗ, ತಾಳ, ಆರೋಹಣ, ಅವರೋಹಣ ಮುಂತಾದ ವಿಷಯಗಳನ್ನೊಳಗೊಂಡ ಶ್ರವ್ಯ ಹಾಗೂ ದೃಶ್ಯ ಮಾಧ್ಯಮದಲ್ಲಿ ಈ ಕಾರ್ಯಕ್ರಮವನ್ನು ನಿರೂಪಿಸಲಾಗಿದೆ.

ಈ ಹಿಂದೆ ಬರೆದಂತೆ 14-22 ವಯಸ್ಸಿನ ಇಬ್ಬರನ್ನು ಒಳಗೊಂಡ ಗುಂಪುಗಳಾಗಿ ಭಾಗವಹಿಸಬಹುದು. ಆಸಕ್ತರು ತಮ್ಮ ಪರಿಚಯದೊಂದಿಗೆ ಸಂಪೂರ್ಣ ವಿಳಾಸ/ದೂರವಾಣಿ ಸಂಖ್ಯೆಯನ್ನು ಅನನ್ಯ ವಿಳಾಸಕ್ಕೆ ನೇರವಾಗಿ ತಲುಪಿಸಬಹುದಾಗಿದೆ. ಜನವರಿ ತಿಂಗಳ 3ನೇ ತಾರೀಖು ಭಾನುವಾರದಂದು ಸ್ಪರ್ಧೆಯು 10.00 ಗಂಟೆಗೆ ಪ್ರಾರಂಭವಾಗುತ್ತದೆ. ಅಭ್ಯರ್ಥಿಗಳಲ್ಲದೆ ಪ್ರೇಕ್ಷಕರೂ ಭಾಗವಹಿಸಬಹುದಾಗಿದೆ.

ಕರ್ನಾಟಕದ ಸುಪ್ರಸಿದ್ಧ ಸಂಗೀತಗಾರರಾದ ವಿದ್ವಾನ್ ಆರ್.ಕೆ. ಪದ್ಮನಾಭರವರು ರಸಪ್ರಶ್ನೆ ಕಾರ್ಯಕ್ರಮವನ್ನು ನಿರ್ವಹಿಸುವರು. ಈ ಕಾರ್ಯಕ್ರಮದಲ್ಲಿ ನಾಡಿನ ಗಣ್ಯ ವಿದ್ವಾಂಸರು ಉಪಸ್ಥಿತರಿರುವರು. ಸ್ಪರ್ಧೆಯಲ್ಲಿ ವಿಜೇತರಾದ ಅಭ್ಯರ್ಥಿಗಳಿಗೆ ಅನನ್ಯದ ವಿಶೇಷ ಕಾರ್ಯಕ್ರಮವೊಂದರಲ್ಲಿ ಬಹುಮಾನವನ್ನು ವಿತರಿಸಲಾಗುವುದು. ಪ್ರಥಮ ಬಹುಮಾನ ಇಬ್ಬರಿಗೆ, ತಲಾ 1500ರೂ. ಗಳು. ದ್ವಿತೀಯ ಬಹುಮಾನ ಇಬ್ಬರಿಗೆ ತಲಾ 1000ರೂ. ಗಳು. ತೃತೀಯ ಬಹುಮಾನ ಇಬ್ಬರಿಗೆ, ತಲಾ 750ರೂ. ಗಳು. ಇದಲ್ಲದೆ ಸ್ಪರ್ಧೆಯಲ್ಲಿ ಪಾಲ್ಗೊಂಡ ಎಲ್ಲಾ ಅಭ್ಯರ್ಥಿಗಳಿಗೂ ಪ್ರಮಾಣಪತ್ರವನ್ನು ನೀಡಲಾಗುವುದು. ಸ್ಪರ್ಧಿಗಳು ಸರಿ ಉತ್ತರ ನೀಡದಿದ್ದಾಗ ಪ್ರೇಕ್ಷಕರು ಸರಿ ಉತ್ತರ ನೀಡಿದರೆ ಅವರಿಗೂ ಕ್ಯಾಸೆಟ್ ರೂಪದ ಬಹುಮಾನವಿದೆ.

ಹೀಗೆ ವಿದ್ಯಾರ್ಥಿಗಳು, ಪೋಷಕರು, ಪ್ರೇಕ್ಷಕರು, ವೀಕ್ಷಕರು ಮತ್ತು ವಿದ್ವಾಂಸರು ಎಲ್ಲರನ್ನೂ ಏಕತ್ರ ಕಲೆ ಹಾಕಿ ವಿಶಿಷ್ಟವಾದ ಮತ್ತು ಪ್ರಯೋಜನಕರವಾದ ಕಾರ್ಯಕ್ರಮವನ್ನು ರೂಪಿಸಬೇಕೆಂಬುದು ನಮ್ಮ ಮಹದಾಸೆ. ನಮ್ಮ ಉದ್ದೇಶ ಮತ್ತು ಉತ್ಸಾಹಕ್ಕೆ ನಿಮ್ಮ ಸದಾ ಪ್ರೋತ್ಸಾಹವಿರಲಿ.

ಸ್ಪರ್ಧೆಯ ಸಾಮಾನ್ಯ ನಿಯಮಾವಳಿಗಾಗಿ 'ಅನನ್ಯ ಅಭಿವ್ಯಕ್ತಿ' ಯ ಸಂಚಿಕೆ-4ನ್ನು ದಯವಿಟ್ಟು ಗಮನಿಸಿ. ಅಥವಾ ಅನನ್ಯದ ಕಾರ್ಯಾಲಯದಲ್ಲಿ ವಿಚಾರಿಸಿ ಪಡೆದುಕೊಳ್ಳಬಹುದು.

**ಅನನ್ಯ ಕಾರ್ಯಾಲಯದ ವಿಳಾಸ :**

**ಅನನ್ಯ-ಜಿ.ಎಂ.ಎಲ್. ಕಲ್ಚರಲ್ ಅಕಾಡೆಮಿ,**

91/2, ಪರಿಮಳ, 4ನೇ ಮುಖ್ಯರಸ್ತೆ,

11 ಮತ್ತು 13ನೇ ಕ್ರಾಸ್ ನಡುವೆ, ಮಲ್ಲೇಶ್ವರಂ,

ಬೆಂಗಳೂರು-560 003.

ದೂರವಾಣಿ : 3345069

ಸಂಯೋಜಕರು-ರಸಪ್ರಶ್ನೆ ವಿಭಾಗ

**Under the joint auspices of**

# KARNATAKA GANAKALA PARISHAT
# ADARSHA ACADEMY OF INDIAN CULTURE
# ARADHANA [CULTURAL FORUM]

## TALENT PROMOTION SERIAL-II

| | | | |
|---|---|---|---|
| 25-12-98 | Sri/Smt. | N.R. Harini - N.R. Sharada | Vocal |
| Friday | | Radhika Venkataramana | Violin |
| 6.00 p.m | | V.N. Nanjunda Murthy | Mridanga |
| | | S. Sethu Madhavan | Khanjari |
| 7.15 to 8.15 | | Vani Yadunandan | Veena |
| | | S. Srinath | Mridanga |
| | | H.N. Sudarshan Chakravarthi | Ghata |
| 26-12-98 | | Amith A. Nadig | Flute |
| Saturday | | M. Shankar | Violin |
| 6.00 p.m. | | S. Ashak | Mridanga |
| | | N. Amruth | Khanjari |
| 7.15 p.m. | | Nikhil Joshi | Guitar |
| | | B.K. Raghu | Violin |
| | | H.S. Venkatesh | Mridanga |
| | | S.V. Giridhar | Ghata |

Auditorium :

**ADARSHA BHAVAN**, 15th Cross, Malleswara

**Aided by:**
**GANAKALA BHUSHANA**
**N. CHOKKAMMA ENDOWMENT**

**and**

**KARNATAKA KALATILAKA R.V. SESHADRI GAVAI**

**In memory of Pandith Panchakshari Gavai**

***All are Welcome***



ಅನನ್ಯ

91/2, 4ನೇ ಮುಖ್ಯರಸ್ತೆ,
ಮಲ್ಲೇಶ್ವರ, ಬೆಂಗಳೂರು-560 003.

ಅನನ್ಯ

# ANANYA PROGRAMMES FOR DECEMBER

## "GEETHA - SHASTRA SINCHANA"

'Raga Soundarya' in Krithis of the Trinity

by

Sangeetha Kalanidhi

**R.K. SRIKANTAN**

Sunday, 13th Dec. 1998 at 10.30 a.m.

at Ananya Sabhangana, Malleswaram.

---

**Jointly with Rajaguru Smriti**
**'PARAMPARA'**

Hindustani Vocal recital by

***Guru Sri Parameshwara Hegde and his disciples***
***Chaitanya Shankar, Raghu, Atma Venkatesh***

*accompanied by*

***Sri Ravindra Yavagal and Guru Sangappa Hoogar (Tabla)***
***Sri Vyasamurthy Katti and Anantha Bhagavatar (Harmonium)***

Saturday, 12th Dec. 1998 at 6.30 p.m.

**at Bharathiya Vidya Bhavan**

---

**Jointly with Sangeeth Sagar**

Hindustani Violin recital by

***Sri Tukaram Kabadi*** *accompanied by*
***Sri Ravi Kudligi (Tabla)***

***Saturday, 19th Dec. 1998 at 6.30 p.m.***

at Ananya Sabhangana, Malleswaram.

---

**Karnatic Violin Duet by**
**Vidwan K.S. Mani & Vidushi Radhika Mani (U.S.A.)**

*accompanied by*

***Vidwan N.G. Ravi (Mridanga)***
***Vidwan M. Dayananda Mohite (Ghata)***

***Sunday, 20th Dec. 1998 at 6.30 p.m.***

at Ananya Sabhangana, Malleswaram.

* Please park your vehicles outside the gate.

Published by : ANANYA, GML CULTURAL ACADEMY, 91/2, 4th Main, Malleswaram, Bangalore-560 003. Phone : 3345069. Printed by : Akshara Printers, Basavanagudi, Bangalore-560 004. Phone : 624082, 624897.